ಮದರಾಸಿನಲ್ಲಿ ನೆರೆದ ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನ
ಸಂದರ್ಭದಲ್ಲಿ ಅರ್ಪಿಸಿದ

# ಮಿತ್ರಮಂಡಳಿಯ ಕಾಣಿಕೆ



ಮಿತ್ರಮಂಡಳಿ

೧೯೪೫ | ಮದರಾಸು | ಒಂದೂಕಾಲು ರೂಪಾಯಿ



ಕರ್ನಾಟಕ ಸಿಂಹಾಸನಾಧೀಶ್ವರರೂ ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರೂ ಆದ
ಶ್ರೀ ಜಯಚಾಮರಾಜ ಒಡೆಯರವರು

ಮದರಾಸಿನಲ್ಲಿ ನೆರೆದ ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನ
ಸಂದರ್ಭದಲ್ಲಿ ಅರ್ಪಿಸಿದ

# ಮಿತ್ರಮಂಡಳಿಯ ಕಾಣಿಕೆ



ಮಿತ್ರಮಂಡಳಿ
ಮದರಾಸು
೧೯೪೫

# ಒಳಪಿಡಿ

| ವಿಷಯ | ಪುಟ |
| --- | --- |



ಪರಿಷತ್ತಿನ ಅಧ್ಯಕ್ಷರಾದ
ಶ್ರೀಮಂತ ಬಸವಪ್ರಭುರಾಜ ಲಖಮಗೌಡ ಸರದೇಸಾಯಿಯವರು



೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನಾಧ್ಯಕ್ಷರಾದ
ಶ್ರೀ ತ್ಯಾಗರಾಜ ಪರಮಶಿವ ಕೈಲಾಸಂ ಅವರು

# ಸ್ವಾಗತ ಗೀತ

೧

ಎಲ್ಲಿ ಕಾವೇರಿ ನಲಿನಲಿದು ಮನದಣಿಸಿತೋ?
ಎಲ್ಲಿ ಗೋದಾವರಿಯು ಅಪ್ಪಿ ಮುದ್ದಿಸಿತೋ?
ಎಲ್ಲಿ ಪಶ್ಚಿಮ ಜಲಧಿ ರತುನಗಳನರ್ಪಿಸಿತೋ?
ಎಲ್ಲಿ ಪೂರ್ವಾಂಬುಧಿಯು ಮುದದೆ ಹರಸಿತ್ತೋ?
ಅಲ್ಲೆಲ್ಲ ನೆಲಸಿಹ,
ಎಲ್ಲೆಲ್ಲು ಮೆರೆದಿಹ,
ಉಲ್ಲಸಿತಕರ್ನಾಟಮೃದುಮಧುರ ಭಾರತಿ! ।
ಸ್ವಾಗತವು ಸ್ವಾಗತವು ಸ್ವಾಗತವು ನಿನಗೆ ॥

೨

ಎಲ್ಲಿ ಕಳಮೆಯಲಿ ಗಿಳಿವಿಂಡಿನಿಂಚರವೋ?
ಎಲ್ಲಿ ಜೋಳದ ರಾಗಿ ನವಣೆಗಳ ಬೆಳೆಯೋ?
ಎಲ್ಲಿ ರಸದಾಳಿ ಹೊಂಬಾಳೆಗಳ ಬೆಳಸೋ?
ಎಲ್ಲಿ ಕಿತ್ತಳೆ ಹಲಸು ತೆಂಗು ಕಂಗುಗಳೋ?
ಎಲ್ಲಿ ಮಲ್ಲಿಗೆ ಮೊಲ್ಲೆ ಜಾಜಿ ಸೇವಂತಿಗೆಯೋ?
ಎಲ್ಲಿ ಸಂಪಿಗೆಯೊ ಕೇದಗೆ ಗುಲಾಬಿಗಳೋ?
ಎಲ್ಲಿ ಮಾಮರದಲ್ಲಿ ಕುಕಿಲ್ವ ಕೋಗಿಲೆಗಳೋ?
ಎಲ್ಲಿ ಕೊಡಗಿನ ಬೆಡಗು ತೊಡವಾಗಿಯಿಹುದೋ?
ಅದಕೆ ನಲಿದಾಡಿದಿರ,
ಅದರೊಳೊಲಿದಾಡಿದಿರ,
ಅದನೆಲ್ಲ ಬಣ್ಣಿಸಲು ಮುದದಿಂದ ಬಂದಿರಾ! ।
ಸ್ವಾಗತವು ಸ್ವಾಗತವು ಸ್ವಾಗತವು ನಿಮಗೆ ॥

೩

ವಿಜಯನಗರದ ಶಿಲ್ಪಕಲೆಗೆ ಮನಸೋತವರೆ!
ಬೇಲೂರ ಹಳೆಬೀಡ ನೋಡಿ ದಣಿದಿಹರೆ!
ಕಾರ್ಕಳದ ಕಾರ್ಗಲ್ಲ ಗೊಮ್ಮಟನ ನೋಡಿದಿರ?
ಶ್ರವಣಬೆಳ್ಗೊಳವ ಬನಶಂಕರಿಯ ಕಂಡಿರ?
ಕೈಲಾಸ ನೋಡಿದಿರ? ಎಲ್ಲೋರ ತಿಳಿದಿರ?
ಬನವಾಸಿ ಶ್ರೀರಂಗ ಯದುಗಿರಿಗೆ ಬಂದಿರ?
ಎಷ್ಟು ವಿಗ್ರಹಗಳೋ? ಎಷ್ಟು ಗುಡಿಬಸದಿಗಳೊ?
ಎಷ್ಟು ಸಾವಿರ ವರುಷದಿಂದ ಮೆರೆದಿಹವೊ?
ಅದರ ಚೆಲುವೆಂತಹದೊ?
ಅದರ ಬಗೆಯೇತರದೊ?
ಅದನೆಲ್ಲ ನೆನೆಯಲಿವರೆಂದಿಲ್ಲಿ ಬಂದಿರಾ! ।
ಸ್ವಾ.... ॥

೪

ಎಲ್ಲಿ ಪಂಪನ ದುಂದುಭಿಯ ನಿನದ ಕೇಳಿತೊ?
ಎಲ್ಲಿ ವಾಗ್ಮಿಗಳು ಪೊನ್ನನಿಗೆ ಮಿಗೆ ಸೋತಿಹರೊ?
ಎಲ್ಲಿ ರನ್ನನು ಗದಾಯುದ್ಧಮಂ ರಚಿಸಿಹನೊ?
ಎಲ್ಲಿ ಅಭಿನವಪಂಪ ಕಂತಿ ಹೊನ್ನಮ್ಮರೊ?
ಎಲ್ಲಿ ಮಧುರ ಕುಮಾರವ್ಯಾಸ ಹರಿಹರರೊ?
ಎಲ್ಲಿ ನರಹರಿ ರಾಘವಾಂಕ ಸರ್ವಜ್ಞರೊ?
ಎಲ್ಲಿ ಆಂಡಯ್ಯ ಲಕ್ಷ್ಮೀಶ ತಿಮ್ಮಣ್ಣರೊ?
ಎಲ್ಲಿ ಮುದ್ದಣ ಪಾರ್ತಿಸುಬ್ಬರುದಿಸಿದರೊ?
ಅಲ್ಲಿಂದ ಬಂದಿರಾ?
ಆ ಪೆಂಪ ತಂದಿರಾ?
ಪಂಪಪೊನ್ನಾದಿಗಳ ನೆನಸುತ್ತೈತಂದಿರಾ! ।
ಸ್ವಾ.... ॥

೫

ಪೂಜ್ಯಪಾದ ಸಮಂತಭದ್ರ ಮುನಿಗಣವೊ?
ಮಧ್ವ ವಿದ್ಯಾರಣ್ಯ ಬಸವರೆಲ್ಲಿದರೊ?
ಅಕ್ಕಮಾದೇವಿ ಮೃದುವಚನಪಾವನವೊ?
ಕನಕದಾಸರ ಪುರಂದರರ ಕೈವಾಡವೊ?
ಹೃದಯವಿಕಸನದ ನವರಸ ರಸಾಯನವೊ?
ಕರ್ನಾಟ ಸಂಗೀತ ಮಧುರ ಮಂಜುಲವೊ?
ಕಾವ್ಯಯೋಗಿಗಳೆನಿತೊ? ಕಾವ್ಯರತ್ನಗಳೆನಿತೊ?
ಅದಕೆ ಮನಸೋತಿರಾ?
ಅದರ ಸೊಬಗರಿದಿರಾ?
ಎಲ್ಲೆಲ್ಲು ಕನ್ನಡದ ಕೀರ್ತಿ ಹಬ್ಬಿಸುವಿರಾ! ।
ಸ್ವಾ.... ॥

೬

ರಾಷ್ಟ್ರಕೂಟದ ನಾಡು ಹೊಯ್ಸಳರ ನೆಲೆವೀಡು,
ಗಂಗ ಚಾಲುಕ್ಯ ಸೌಂದತ್ತಿಯರ ನಾಡು,
ವಿಜಯನಗರದ ದಿವ್ಯಸೌಭಾಗ್ಯಕಿದೆ ಬೀಡು,
ಮೈಸೂರ ಸಿರಿಮುಡಿಗೆ ಇದು ಹೊನ್ನ ನಾಡು.
ತುಳುರಾಜ ಚೌಟರಿಗೆ ವಿಜಯ ತಂದಿಹ ನಾಡು,
ಧೀರವೀರರ ಪೊತ್ತ ಹಿರಿಯ ಸಿರಿನಾಡು.
ಆಳಿದವರೆನಿಬರೋ ? ರಾಜ್ಯಸೂತ್ರಗಳೆನಿತೊ ?
ಸೋಲುಗೆಲವುಗಳೆಲ್ಲ ರಾಜ್ಯರಾಜರಿಗೋ ?
ಬಾಳಿರುವ ಕನ್ನಡದ ಸಂಸ್ಕೃತಿಯು ಚಿರವಾಗಿ
ಮೇಳಯಿಸಿ ಬಂದಿರುವ ವೈಚಿತ್ರ್ಯವೆನಿತೋ ?

ಇದುವೆ ಸೌಭಾಗ್ಯ
ಇದು ನಮ್ಮ ಭಾಗ್ಯ,
ಇದುವೆ ಕನ್ನಡದ ಕತ್ತುರಿಯ ಸೌರಭ್ಯ ।
॥ ಸ್ವಾ.... ॥

೭

ಜಾತಿಮತಗಳ ಭೇದಭೇದಗಳವೆಂತೋ ?
ನಾಡ ಗಡಿ ನುಡಿ ನಡತೆ ವೈವಿಧ್ಯವೆಂತೋ ?
ಅರಸುತನದಧಿಕಾರವಿಷಮತೆಗಳೆನಿತೋ ?
ಏರಿಏರಿಯ ಸಂಕುಚಿತ ಭಾವನೆಗಳೆನಿತೋ ?
ಕರ್ನಾಟವೊಂದಾಗಿ ಮೆರೆವ ಸುಖವೆಂತೋ ?
ಹರಿದು ಹಂಚಾಗಿ ಬಾಳುವ ಬಾಳಿದೆಂತೋ ?

ಎಂದೆಲ್ಲ ನೆನೆದಿರಾ !
ಒಂದಾಗಿ ನಿಂದಿರಾ !
ಇಂದೆ ಕನ್ನಡವೊಂದೆಯೆಂದೊಲಿದು ಬಂದಿರಾ ! ।
ಸ್ವಾ.... ॥

೮

ತಮಿಳು ನುಡಿಗಳ ಮೃದುಲ ಮಾಧುರ್ಯವಿಲ್ಲಿ,
ತೆಲುಗು ಮಾತಿನ ಮಧುರ ಗಾಂಭೀರ್ಯವಿಲ್ಲಿ,
ಮಲೆಯಾಳ ತುಳುವೆ ಮೊದಲಾದ ನುಡಿಗಿಲ್ಲಿ,
ಚೆಲುವ ಕನ್ನಡ ಸುರಬಿಕತ್ತುರಿಯ ಚೆಲ್ಲಿ,
ಹುಟ್ಟದುವಿವೊಂದೆ ನುಡಿತಾಯ ಬಸುರಲ್ಲಿ,
ಹೆಚ್ಚುಕಡಮೆಗಳೆಂಬ ಭೇದವಿನ್ನೆಲ್ಲಿ ?
ಉದಯ ಸಾಗರದ ನಿರ್ಘೋಷ ಕೇಳುತಲಿ,
ಉದಯವಾಗಿರಲಿ ಕನ್ನಡದ ಸಿರಿಯಿಲ್ಲಿ,
ಚೆನ್ನಪ್ಪನಾಯಕನ 'ಚೆನ್ನಪುರಿ' ಯಲ್ಲಿ,
ಚೆನ್ನ ಕನ್ನಡ ಚೆನ್ನ ಚೆನ್ನಾಗಲಿಲ್ಲಿ.

ಎಲ್ಲ ಸೋದರಿಯರೆ !
ಎಲ್ಲ ಸೋದರರೇ
ಎಲ್ಲೆಲ್ಲು ಸಹಕರಿಸೆ ಮುಂದೆ ಬಂದಿಹರೆ ! ।
ಸ್ವಾ.... ॥

ಸಿ. ಕೆ. ತಿರುಮಲೇಶ
ವಿಶ್ವವಿದ್ಯಾಲಯ, ಮದರಾಸು

## ನಮ್ಮ ಕನ್ನಡ ನಾಡು

ರಾಗ: ಸುರಟ—ಏಕ ತಾಳ

ನಮ್ಮ ಕನ್ನಡ ನಾಡಿದು
ನಾವು ಹುಟ್ಟಿದ ನಾಡಿದು
ಅನ್ನವೀಯುವ ನಾಡಿದು
ತಾಯಿ ನಾಡಿದು ನಮ್ಮದು ॥ ಪ ॥

ನಮ್ಮ ಕನ್ನಡ ನಾಡಿದು
ನಮ್ಮ ಕಲೆಗಳ ನಾಡಿದು
ನಮ್ಮ ಕವಿಗಳ ಗೂಡಿದು
ಪುಲಿಕೇಸಿ ವೀರರ ನಾಡಿದು
ವಿಜಯನಗರದ ನಾಡಿದು
ನಮ್ಮ ಸೊಬಗಿನ ನೆಲೆಯಿದು ॥ ೧ ॥

ನಮ್ಮ ಕನ್ನಡ ನಾಡಿದು
ಬಸವ ಹುಟ್ಟಿದ ನಾಡಿದು
ಮಧ್ವ ಜನಿಸಿದ ನಾಡಿದು
ಅಕ್ಕ ಹುಟ್ಟಿದ ನಾಡಿದು
ದಾಸರುದಿಸಿದ ನಾಡಿದು
ವಚನ ಪೇಳಿದ ನಾಡಿದು ॥ ೨ ॥

ನಮ್ಮ ಕನ್ನಡ ನಾಡಿದು
ವಿಶ್ವಮತಗಳ ನೆಲೆಯಿದು
ವಿಶ್ವಪ್ರೇಮದ ಬೀಡಿದು
ವಿಜಯ ತೋರುವ ನಾಡಿದು
ಜ್ಞಾನ ಬೀರುವ ನಾಡಿದು
ಶಾಂತಿ ಸಾರುವ ನಾಡಿದು ॥ ೩ ॥

ಕುಮಾರಿ ಶಾರದ
ಶ್ರೀ॥ ಭೋಗಿಶೆಟ್ಟಿ ಜೂಗಪ್ಪನವರ ಪುತ್ರಿ

# ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಾಹಿತ್ಯ ಪರಿಷತ್ತು, ೧೯೧೫ನೆಯ ಮೇ ತಿಂಗಳಲ್ಲಿ ಬೆಂಗಳೂರಲ್ಲಿ ಮೊದಲನೆಯ ಕನ್ನಡ ಸಾಹಿತ್ಯ ಸಮ್ಮೇಳನ ನೆರೆದಾಗ ಸ್ಥಾಪಿತವಾಯಿತು. ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಆಗ ಮೈಸೂರಿನ ದಿವಾನರು. ಅದರ ಹಿಂದೆ ೨೫–೩೦ ವರ್ಷಗಳಿಂದ ಕನ್ನಡ ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ಸಂಸ್ಥೆಗಳು ಕನ್ನಡಿಗರಲ್ಲಿ ಮಾತೃಭಾಷಾಜ್ಞಾನವನ್ನೂ ಪ್ರೇಮವನ್ನೂ ಹರಡಿದ್ದದ್ದರಿಂದ ಕರ್ನಾಟಕದ ನಾಲ್ಕು ಕಡೆಯ ಹಿರಿಯರು ಕನ್ನಡ ಜನತೆಯನ್ನು ಒಂದುಗೂಡಿಸಬೇಕೆಂಬ ಯೋಚನೆ ಮಾಡುವುದು ಆಗ್ಗೆ ಸಾಧ್ಯವಾಯಿತು. ಇಂಥ ಸಂಸ್ಥೆಗಳಲ್ಲಿ ಮುಖ್ಯವಾದುವು ಮೈಸೂರಿನ ಭಾಷೋಜ್ಜೀವಿನೀ ಸಭೆ, ಧಾರವಾಡದ ವಿದ್ಯಾವರ್ಧಕ ಸಂಘ. ಮೈಸೂರಿನ ಸಂಸ್ಥೆಗೆ ಮೈಸೂರ ಅರಸರ ಸಹಾಯ ಉತ್ತೇಜನಗಳು ದೊರೆತದ್ದು ಸಹಜವೆ. ಆದರೆ, ಕನ್ನಡ ಒಂದು ಎಂಬುದನ್ನು ಪ್ರಮುಖರು ಆ ಮೊದಲೆ ಮನಗಂಡಿದ್ದರೆಂಬುದಕ್ಕೆ ಸಾಕ್ಷಿಯಾಗಿ ವಿದ್ಯಾವರ್ಧಕ ಸಂಘಕ್ಕೂ ಮೈಸೂರ ಪ್ರಭುಗಳು ಧನ ಸಹಾಯ ನೀಡಿದರು; ಅದರ ಮಂದಿರಕ್ಕೆ ತಮ್ಮ ಹೆಸರನ್ನು ಇಡಲು ಒಪ್ಪಿಗೆ ಕೊಟ್ಟರು. ಮೊದಲಬಾರಿ ಸಮ್ಮೇಲನಕ್ಕೆ ಈಚೆಗೆ ದಿವಂಗತರಾದ ಧಾರವಾಡದ ಶ್ರೀ॥ ರೊದ್ದ, ಕರಿಗುದುರಿ, ದೇಶಪಾಂಡೆ ಮಹನೀಯರೂ, ದೈವಕೃಪೆಯಿಂದ ಈಗಲೂ ಕನ್ನಡದ ಸೇವೆಯಲ್ಲಿ ತೊಡಗಿರುವ ಶ್ರೀ॥ ಮುದವೀಡು ಕೃಷ್ಣರಾಯರು, ಆಲೂರು ವೆಂಕಟರಾಯರೂ, ಮಂಗಳೂರಿಂದ ಶ್ರೀ॥ ಗಳಾದ ದಿವಂಗತ ಪಂಜೆ ಮಂಗೇಶರಾಯರು, ಬೆನಗಲ್ ರಾಮರಾಯರು, ಎಚ್. ನಾರಾಯಣರಾಯರೂ ಈಗಲೂ ನಮ್ಮೊಡನೆ ಕನ್ನಡದ ಸೇವೆಯಲ್ಲಿ ಮೇಲ್ಪಂಕ್ತಿಯಾಗಿ ದುಡಿಯುತ್ತಿರುವ ಶ್ರೀ॥ ಕಡೇಕಾರ್ ರಾಜಗೋಪಾಲ ಕೃಷ್ಣರಾಯರೂ, ಇತರ ಕನ್ನಡ ಜಿಲ್ಲೆಗಳಿಂದ ಶ್ರೀ॥ ಕೌಜಲಗಿ ಶ್ರೀನಿವಾಸರಾಯರು, ತಿಮ್ಮ ಕೃಷ್ಣರಾಯರು ಮುಂತಾಗಿ ಹತ್ತಾರು ಪ್ರಮುಖ ಮಹನೀಯರೂ ಆಗಮಿಸಿದ್ದರು. ಸಮ್ಮೇಲನದ ಅಧ್ಯಕ್ಷರಾದ ರಾಜಮಂತ್ರಪ್ರವೀಣ ಶ್ರೀ॥ ಎಚ್. ವಿ. ನಂಜುಂಡಯ್ಯನವರು ಅಂದು ಆರಂಭಿಸಿದ ಸಂಸ್ಥೆ ಕನ್ನಡ ಜನತೆಯ ಕೇಂದ್ರ ಸಂಸ್ಥೆಯಾಗಿ ಎಲ್ಲ ಪ್ರಾಂತದ ಕನ್ನಡಿಗರನ್ನು ಒಂದುಗೂಡಿಸಲೆಂದು ಹರಸಿದರು.

ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮದಲ್ಲಿ ಅಖಿಲ ಕರ್ನಾಟಕದ ಸಾಹಿತ್ಯ ಸಮ್ಮೇಲನವನ್ನು ನೆರಸುವುದು, ಪುಸ್ತಕ ಭಂಡಾರ ವಾಚನಾಲಯಗಳನ್ನು ಸ್ಥಾಪಿಸುವುದು, ಹಳೆಯ ಮತ್ತು ಹೊಸ ಗ್ರಂಥಗಳ ಪ್ರತಿಗಳನ್ನು ಶೇಖರಿಸುವುದು, ಪೂರ್ವ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸುವುದು, ಪ್ರಕೃತಕಾಲದ ಗ್ರಂಥಕರ್ತರಿಗೆ ಉತ್ತೇಜನ ಕೊಡುವುದು, ಇವು ಮುಖ್ಯವಾದ ಅಂಶಗಳು. ಈವರೆಗೆ ಇಪ್ಪತ್ತೆಂಟು ಸಮ್ಮೇಲನಗಳು ನೆರೆದಿವೆ. ಸಮ್ಮೇಲನಕ್ಕೆ ವರ್ಷಂಪ್ರತಿ ಒಬ್ಬ ಪ್ರಮುಖ ಭಾಷಾಸೇವಕರನ್ನು ಅಧ್ಯಕ್ಷರಾಗಿ ಆರಿಸಿ ಗೌರವಿಸುವುದು ಒಂದುಸಂಪ್ರದಾಯವಾಗಿ ಬೆಳೆಯಿತು. ಹತ್ತುಜನ ಒಪ್ಪಿ ಪ್ರಮುಖರೆಂದು ಗುರುತಿಸಿ ನೀಡಿದ ಈ ಮನ್ನಣೆಯೇ ಭಾಷೆಯ ಸೇವಕರಿಗೆ ಹಿರಿಯ ಮರ್ಯಾದೆಯಾಗಿ ಪರಿಣಮಿಸಿತು. ಸಮ್ಮೇಲನ ನಾಲ್ಕನೆಯ ವರ್ಷದಿಂದ ಬೇರೆಬೇರೆ ಸ್ಥಳಗಳಲ್ಲಿ ನೆರೆದಿದೆ. ಅದರ ಅಧ್ಯಕ್ಷರು ಕನ್ನಡದ ಎಲ್ಲ ಪ್ರಾಂತಗಳಿಂದಲೂ ಬಂದಿದಾರೆ. ಮೊದ ಮೊದಲಲ್ಲಿ ಜನ ನೆರೆಯುತ್ತಿದ್ದದ್ದು ಬಹಳ ಅಲ್ಲದಿದ್ದರೂ, ಭಾಷಾಭಿಮಾನ ಬೆಳೆದು ಜನತೆ ಎಚ್ಚರಗೊಂಡಂತೆ ಇತ್ತೀಚೆಗೆ ಸಮ್ಮೇಲನಗಳ ಜನ ಸಂದಣಿ ಭಾಷಾಪ್ರೇಮಿಗಳ ಮನಸ್ಸಿಗೆ ಧೈರ್ಯ ಕೊಡುವಂಥದಾಗಿದೆ. ಇದುವರೆಗೆ ಏನಿಲ್ಲವೆಂದರೂ ಒಂದು ಜಿಲ್ಲೆಯ ಮುಖ್ಯ ಸ್ಥಳದಲ್ಲಿ ನೆರೆಯುತ್ತಿದ್ದು, ಹಿಂದಿನ ಸಲದ ಸಮ್ಮೇಲನ ಸಾಂಗ್ಲಿ ಸಂಸ್ಥಾನದ ರಬಕವಿಯಂಥ ತಹಸೀಲು ಸ್ಥಳದಲ್ಲಿ ಕೂಡಿತು; ಎಂದಿಗಿಂತಲೂ ಚೆನ್ನಾಗಿ ವಿಜೃಂಭಣೆಯಿಂದ ನಡೆಯಿತು.

ಪರಿಷತ್ತು ಬೆಂಗಳೂರಿನಲ್ಲಿ ಒಂದು ಗ್ರಂಥ ಭಂಡಾರವನ್ನು ನಡಸುತ್ತಿದೆ. ಅದರಲ್ಲಿ ಈಗ ಬೇರೆ ಬೇರೆ ತರದ ಗ್ರಂಥಗಳಿವೆ. ಭಂಡಾರದ ಗ್ರಂಥಸಂಗ್ರಹ ಸಮಗ್ರವೇನೂ ಆಗಿಲ್ಲ. ಸಂಗ್ರಹವನ್ನು ಸರ್ವತೋಮುಖವಾಗಿ ಊರ್ಜಿತಗೊಳಿಸಿ ಕನ್ನಡದ ಗ್ರಂಥಗಳ ಒಂದಾದರೂ ಸಮಗ್ರ ಭಾಂಡಾಗಾರವಾಗಿ ಮಾಡುವುದು ಆವಶ್ಯಕ.

ಕನ್ನಡ ಸಾಹಿತ್ಯದ ಪ್ರಮುಖ ಕೃತಿಗಳನ್ನು ಪರಿಷ್ಕರಿಸಿ

ಪ್ರಕಟಿಸುವ ಕಾರ್ಯ ತಕ್ಕಷ್ಟು ನಡೆದಿದೆ. ಪಂಪಭಾರತ, ಶಬ್ದಮಣಿದರ್ಪಣ, ವಡ್ಡಾರಾಧನ, ಸೋಮೇಶ್ವರಶತಕ, ಇವುಗಳಲ್ಲಿ ಮುಖ್ಯವಾದುವು. ಈ ಭಾಗದಲ್ಲಿ ಇತರ ಕೆಲಸ ನಡೆಯುತ್ತಿದೆ.

ಪ್ರಕೃತಕಾಲದಲ್ಲಿ ಗ್ರಂಥರಚನೆಗೆ ಪ್ರೋತ್ಸಾಹಕೊಡುವುದೆಂಬ ಕಾರ್ಯಕ್ರಮದ ಭಾಗ ಹಣದ ಅಭಾವದಿಂದ ಸಾಕಾದಷ್ಟು ನಡೆದಿಲ್ಲ. ಜನತೆಯ ಮನದಲ್ಲಿ ಕನ್ನಡ ಜೀವನದ ಒಂದು ಕಲ್ಪನೆ ಮೂಡುವಂತೆ ಪರಿಷತ್ತು ಪಂಡಿತರಿಂದ "ಕನ್ನಡ ಬಾವುಟ" ಎಂಬ ಒಂದು ಕಾವ್ಯ ಸಂಕಲನವನ್ನು ಮಾಡಿಸಿ, ಕನ್ನಡನಾಡಿನ ಇತಿಹಾಸವೊಂದನ್ನು ಬರೆಯಿಸಿ ಪ್ರಕಟಿಸಿದೆ; ಕೆಲವು ಗ್ರಂಥಗಳಿಗೆ ಸಾಧ್ಯವಾದ ಅಲ್ಪ ಸ್ವಲ್ಪ ಸಹಾಯವನ್ನು ನೀಡಿದೆ. ಈಗ ತಾನೆ ಸ್ವಲ್ಪ ಹಣ ಕೈಸೇರಿ ಈ ವರ್ಷ ಐವರು ಗ್ರಂಥ ಕರ್ತರಿಗೆ, ಒಬ್ಬೊಬ್ಬರಿಗೆ ನೂರು ರೂಪಾಯಿಯಂತೆ, ಒಟ್ಟು ಐದುನೂರು ರೂಪಾಯಿ ಬಹುಮಾನವನ್ನು ಕೊಡುವುದಾಗಿದೆ. ಮುಂದಿನ ವರ್ಷಗಳಲ್ಲಿ ಇದಕ್ಕೆ ಕಡಮೆ ಇಲ್ಲದೆ ಪ್ರೋತ್ಸಾಹ ಕೊಡಲಾದೀತೆಂದು ಆಶಿಸಬಹುದಾಗಿದೆ.

ಪರಿಷತ್ತು ಆರಂಭವಾದಾಗಿನಿಂದ ಮೈಸೂರಿನ ಪ್ರಭುಗಳು ಅದಕ್ಕೆ ಮಹಾ ಪೋಷಕರಾಗಿ ಇದ್ದಿದಾರೆ. ಪ್ರಭುಗಳೂ, ರಾಜಕುಟುಂಬದವರೂ ಮತ್ತು ಮೈಸೂರಿನ ಸರಕಾರದವರೂ ಅದಕ್ಕೆ ಏಕಪ್ರಕಾರವಾಗಿ ಸಹಾಯವನ್ನು ನೀಡಿದಾರೆ. ಆಳಿದ ಮಹಾಸ್ವಾಮಿಗಳು ಶ್ರೀಮನ್ ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರವರು ನೀಡಿದ ಐದು ಸಾವಿರ ರೂಪಾಯಿ, ದಿವಂಗತ ಶ್ರೀಮದ್ ಯುವರಾಜರು ಶ್ರೀ ಕಂಠೀರವ ನರಸಿಂಹರಾಜ ಒಡೆಯರವರು ದಯಪಾಲಿಸಿದ ಮೂರು ಸಾವಿರ ರೂಪಾಯಿ, ಇವರ ಸೋದರ ಮಾವಂದಿರು ದಿವಂಗತ ಶ್ರೀ ಸರದಾರ ಸರ್ ಮೈಸೂರು ಕಾಂತರಾಜ ಅರಸಿನವರು ನೀಡಿದ ಐದು ಸಾವಿರ ರೂಪಾಯಿ, ಮೈಸೂರು ಸರಕಾರ ಸಹಾಯ ಧನವಾಗಿ ನೀಡಿದ ಹದಿನಾರು ಸಾವಿರ ರೂಪಾಯಿಗಳಿಗೆ ಪರಿಷತ್ತು ಎರಡು ಮೂರು ಸಾವಿರ ರೂಪಾಯಿ ಸೇರಿಸಿ ಬೆಂಗಳೂರಿನಲ್ಲಿರುವ ಪರಿಷನ್ಮಂದಿರ ಆಯಿತು. ಅದನ್ನು ಆಳಿದ ಮಹಾಸ್ವಾಮಿಯವರ ಹೆಸರಿಂದ "ಶ್ರೀ ಕೃಷ್ಣರಾಜ ಪರಿಷನ್ಮಂದಿರ" ಎಂದು ಕರೆಯುತ್ತಿದೆ. ಯುವರಾಜರು ಶ್ರೀ ನರಸಿಂಹರಾಜ ಒಡೆಯರವರು ವಿಜ್ಞಾನ ಗ್ರಂಥಗಳ ನಿರ್ಮಾಣ ಪ್ರಕಟನಕ್ಕಾಗಿ ಎರಡುಸಾವಿರ ದೈನೂರು ರೂಪಾಯಿ ನಿಧಿಯೊಂದನ್ನು ನೀಡಿದರು. ಮೈಸೂರ ಸರಕಾರ ಮೊದಲಲ್ಲಿ ತಿಂಗಳೊಂದಕ್ಕೆ ೧೫೦ ರೂಪಾಯಿಯಂತೆ ಖರ್ಚಿನ ಹಣವನ್ನು ಕೊಡಲು ಆರಂಭಿಸಿ ಈಗ ವರ್ಷಕ್ಕೆ ೩,೦೦೦ ರೂಪಾಯಿ ಸಹಾಯವನ್ನು ಕೊಡುತ್ತಿದೆ. ಕಟ್ಟಡಕ್ಕಾಗಿ ಮೊತ್ತವನ್ನು ಕೊಡುವುದರಲ್ಲಿಯೂ, ಒಂದು ನಿವೇಶನವನ್ನು ಒದಗಿಸುವುದರಲ್ಲಿಯೂ, ವರ್ಷಾಶನವನ್ನು ೩,೦೦೦ ರೂಪಾಯಿಗಳಿಗೆ ಹೆಚ್ಚಿಸುವುದರಲ್ಲಿಯೂ ಮೈಸೂರಿನ ಅಂದಿನ ದಿವಾನರು ಅಮೀನ್-ಉಲ್-ಮುಲ್ಕ್ ಸರ್ ಮಿರ್ಜಾ ಮಹಮ್ಮದ್ ಇಸ್ಮಾಯಿಲ್ ಮಹಾಶಯರು ಮುಖ್ಯ ಕಾರಣರಾಗಿ ವಿಶ್ವಾಸ ತೋರಿದರು.

ಪರಿಷತ್ತಿಗೆ ಸಹಜವಾಗಿ ಅಚ್ಚುಮಾಡಿಸುವ ಕೆಲಸ ಬಹಳ ಇದ್ದಿದೆ. ಕಾರ್ಯ ಸುಸೂತ್ರವಾಗಿ ನಡೆಯುವುದಕ್ಕೆ, ವೆಚ್ಚ ಮಿತಿಯಲ್ಲಿರುವುದಕ್ಕೆ, ಒಂದು ಸ್ವಂತ ಅಚ್ಚುಕೂಟ ಆವಶ್ಯಕವೆಂದು ಆರಂಭದಿಂದಲೂ ಕಂಡಿತು. ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಈ ಬಗ್ಗೆ ಆರುಸಾವಿರ ರೂಪಾಯಿಗಳ ಉದಾರ ದಾನ ಮಾಡಿ ಈಗ ಪರಿಷತ್ತಿನದಾಗಿ ಒಂದು ಅಚ್ಚುಕೂಟ ಇದೆ.

ಈಗಿನ ಅಧ್ಯಕ್ಷರು ಶ್ರೀಮಂತ ಬಸವಪ್ರಭು ರಾಜಾ ಲಖಮಗೌಡ ಸರದೇಸಾಯಿಯವರು ೧,೫೦೦ ರೂ.ಗಳ ಧನ ನೀಡಿದ್ದಾರೆ. ಮುಂದೆ ಸೂಚಿಸಿರುವ ಪ್ರಕಾರ ದತ್ತಿ ನಿಧಿಗಳು ದೊರೆತಿವೆ.

ಪರಿಷತ್ತು ಆರಂಭದಶೆಯಲ್ಲಿ ಸದಸ್ಯತ್ವವನ್ನು ವಿಸ್ತಾರಗೊಳಿಸುವ ಕಾರ್ಯಕ್ಕೆ ಪ್ರಾಮುಖ್ಯ ಕೊಡಲಿಲ್ಲ. ಜನತೆ ಎಚ್ಚರಗೊಂಡಂತೆ ಇದು ಆವಶ್ಯಕವಾಯಿತು, ಸಾಧ್ಯವೂ ಆಯಿತು. ಮೊದಲ ವರ್ಷದಲ್ಲಿ ಇದ್ದ ಸದಸ್ಯ ಸಂಖ್ಯೆ, ಈ ಸಮ್ಮೇಲನ ಕಾಲಕ್ಕೆ ಸುಮಾರು ೨,೫೦೦ ಆಗುವುದೆಂದು ನಿರೀಕ್ಷಿಸಿದೆ. ಮುಂದೆ ಕೊಡುವ ಅಂಕೆಗಳಿಂದ ಈ ಬೆಳವಣಿಗೆ ಸ್ಪಷ್ಟವಾಗುತ್ತದೆ. ಸದಸ್ಯ ಸಂಖ್ಯೆ ಈ ಮಟ್ಟಕ್ಕೆ ಬಂದಿರುವುದರಿಂದ ಆಯ ವ್ಯಯದ ಪರಿಮಾಣ ಈಗ ಈ ರೀತಿ ಇದೆ: ವರಮಾನ: ೨೦ ಸಾವಿರ; ವೆಚ್ಚ: ೧೬ ಸಾವಿರ.

ಪರಿಷತ್ತು ಆರಂಭವಾದಾಗ ರಾಜಮಂತ್ರಪ್ರವೀಣ ಶ್ರೀ॥ ಎಚ್. ವಿ. ನಂಜುಂಡಯ್ಯನವರು ಅಧ್ಯಕ್ಷರಾಗಿದ್ದು

ಅವರ ಅನಂತರ ಶ್ರೀ॥ ಸರದಾರ ಮೈಸೂರು ಕಾಂತರಾಜ ಅರಸಿನವರೂ, ಶ್ರೀಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಆ ಸ್ಥಾನವನ್ನಲಂಕರಿಸಿದ್ದರು. ಈಚೆಗೆ ಆಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜ ಒಡೆಯರವರು ಯುವರಾಜರಾಗಿದ್ದ ಕಾಲದಲ್ಲಿ ಅಧ್ಯಕ್ಷರಾಗಿದ್ದರು. ಇವರು ಸಿಂಹಾಸನಾರೂಢರಾದಂದಿನಿಂದ ಮಹಾಪೋಷಕರಾಗಿರುತ್ತ, ಒಂಟಿಮುರಿಯ ಸರದೇಸಾಯಿ ಶ್ರೀಮಂತ ಬಸವಪ್ರಭುಗಳು ಅಧ್ಯಕ್ಷರಾಗಿ ಇದ್ದಾರೆ.

ಪರಿಷತ್ತು ಆರಂಭವಾದ ಕಾಲದಲ್ಲಿ ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಮಹಿಷಿ ಶಾಮರಾಯರವರು ಉಪಾಧ್ಯಕ್ಷರಾಗಿದ್ದು, ಅವರ ತರುವಾಯ ರಾಜಸಭಾಭೂಷಣ ಶ್ರೀ॥ ಕರ್ಪೂರ ಶ್ರೀನಿವಾಸರಾಯರವರು ಆ ಸ್ಥಾನವನ್ನು ಅಲಂಕರಿಸಿದ್ದರು. ಈಚೆಗೆ ೧೯೩೩-೩೪ರ ವರೆಗೆ ಶ್ರೀ॥ ದೇ. ವೆಂ. ಗುಂಡಪ್ಪನವರೂ, ೧೯೩೯-೪೨ರ ವರೆಗೆ ರಾಜಸೇವಾಸಕ್ತ ಶ್ರೀ॥ ಬೆ. ಮೈ. ಶ್ರೀಕಂಠಯ್ಯನವರೂ ಈ ಸ್ಥಾನದಲ್ಲಿದ್ದರು. ಈಗ ಮೂರು ವರ್ಷಗಳಿಂದ ನಾನು ಉಪಾಧ್ಯಕ್ಷನಾಗಿದೇನೆ.

ಪರಿಷತ್ತಿನ ಕೆಲಸವನ್ನು ನಡಸಲು ಪ್ರಾಂತ ಪ್ರಾಂತಗಳ ಪ್ರತಿನಿಧಿಗಳನ್ನು ಒಳಕೊಂಡ ಕಾರ್ಯಸಮಿತಿ ಒಂದು

## ಪರಿಷತ್ತಿನ ನಿಧಿ

| ಸಂ. | ದಾತೃಗಳು | | ಉದ್ದೇಶ | ಮೊತ್ತ | | |
|---|---|---|---|---|---|---|
| ೧. | ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು | .. | ಗಮಕ | ೧,೦೦೦ | ೦ | ೦ |
| ೨. | ಶ್ರೀ॥ ಎ. ಕೆ. ಅಸುಂಡಿ ಅವರು | .. | ,, | ೧,೦೦೦ | ೦ | ೦ |
| ೩. | ಶ್ರೀಮತಿ ಡಿ. ಚಂಪಾಬಾಯಿ ಅವರು | .. | ,, | ೨೦೦ | ೦ | ೦ |
| ೪. | ವಿದ್ವಾನ್ ಶ್ರೀ॥ ಎಚ್. ಹನುಮಂತರಾಯರು | .. | ,, | ೧೦೦ | ೦ | ೦ |
| ೫. | ಶ್ರೀಮತಿ ಲಕ್ಷ್ಮೀದೇವಮ್ಮನವರ ನಿಧಿ | .. | ,, | ೧೦೦ | ೦ | ೦ |
| ೬. | ಶ್ರೀ॥ ಎ. ಕೆ. ಅಸುಂಡಿ ಅವರು | .. | ಹರಿದಾಸ ಸಾಹಿತ್ಯಪ್ರಕಟನೆ | ೧,೫೦೦ | ೦ | ೦ |
| ೭. | ವಿದ್ವಾನ್ ಶ್ರೀ॥ ಎಚ್. ಹನುಮಂತರಾಯರು | .. | ,, | ೧೦೦ | ೦ | ೦ |
| ೮. | ರಾಜಸೇವಾಸಕ್ತ ದಿವಾನ್ ಬಹದ್ದೂರ್ ಶ್ರೀ॥ ರಾಮಸ್ವಾಮಿ ಅವರು | .. | ಸಾಹಿತ್ಯ ಪರೀಕ್ಷೆ | ೧,೦೦೦ | ೦ | ೦ |
| ೯. | ರಾಜಸೇವಾಸಕ್ತ ಶ್ರೀ॥ ಬೆಳ್ಳಾವೆ ವೆಂಕಟನಾರಣಪ್ಪನವರ ಶಿಷ್ಯರೂ ಮಿತ್ರರೂ | .. | ಸ್ಮಾರಕ ಉಪನ್ಯಾಸ | ೧,೦೪೩ | ೦ | ೦ |
| ೧೦. | ಜಾವಳಿ ಶ್ರೀ॥ ಗಣೇಶರಾಯರು (ಜಾವಳಿ ಶ್ರೀ॥ ಮಹಾಲಕ್ಷ್ಮಮ್ಮ-ಲಕ್ಷ್ಮಯ್ಯ ಇವರ ಸ್ಮಾರಕವಾಗಿ) | .. | ,, | ೨,೦೦೦ | ೦ | ೦ |
| ೧೧. | ಅಡ್ವೊಕೇಟ್ ಶ್ರೀ॥ ಕೆ. ಗೋಪಿವಲ್ಲಭ ಅಯ್ಯಂಗಾರ್ (ಶ್ರೀಮತಿ ಕುಂತಲಮ್ಮನವರ ಸ್ಮಾರಕವಾಗಿ) | .. | ,, | ೨೫೦ | ೦ | ೦ |
| ೧೨. | ಶ್ರೀ॥ ಎಸ್. ಜಿ. ಶಾಸ್ತ್ರಿಗಳವರು (ಶ್ರೀ॥ ಸೌ. ವೆಂಕಟಸುಬ್ಬಮ್ಮನವರ ಹೆಸರಿನಲ್ಲಿ) | .. | ಉಪನ್ಯಾಸ | ೧,೬೦೦ | ೦ | ೦ |
| ೧೩. | ಶ್ರೀಮತಿ ಪಂಕಜಮ್ಮ ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಶ್ರೀಮತಿ ಡಿ. ಚಂಪಾಬಾಯಿ ಅವರ ಹೆಸರಿನಲ್ಲಿ) | .. | ,, | ೩೦೦ | ೦ | ೦ |
| ೧೪. | ಶ್ರೀಮತಿ ಎ. ಶೇಷಮ್ಮ (ಅವರ ಮಗ ದಿವಂಗತ ಶ್ರೀ॥ ಇ. ಎ. ಭಾಸ್ಕರರಾಯರ ಸ್ಮಾರಕವಾಗಿ) | .. | ಪ್ರಬಂಧ ಸ್ಪರ್ಧೆ | ೧,೩೪೯ | ೦ | ೦ |
| ೧೫. | ಪರಿಷತ್ತಿನ ಮಹಿಳಾ ಶಾಖೆ (ಶ್ರೀಮತಿ ಶೇಷಮ್ಮನವರ ಸ್ಮಾರಕ) | .. | ಸ್ಪರ್ಧೆ | ೫೧೫ | ೦ | ೦ |
| | ಒಟ್ಟು | .. | | ೧೨,೦೯೭ | ೦ | ೦ |

ಮೊದಲಿಂದ ಇದ್ದಿದೆ. ಪರಿಷತ್ತಿನ ಕಚೇರಿ ಬೆಂಗಳೂರಿನಲ್ಲಿ ಇರುವುದರಿಂದ ಸಮಿತಿಯ ಅಧಿಕಾರ ಸ್ಥಾನಗಳಿಗೆ ಬೆಂಗಳೂರಿನಲ್ಲಿ ವಾಸವಾಗಿರುವ ಸದಸ್ಯರನ್ನು ಆರಿಸುವುದು ನಿಯಮ. ಉಪಾಧ್ಯಕ್ಷ ಸ್ಥಾನವೂ ಈ ನಿಯಮಕ್ಕೆ ಒಳಪಟ್ಟಿದೆ. ಪರಿಷತ್ತಿನ ಕಾರ್ಯದರ್ಶಿ ಕೋಶಾಧಿಕಾರಿಗಳಾಗಿ ದಿವಂಗತ ಶ್ರೀ॥ ಡಾ॥ ಪಿ. ಎಸ್. ಅಚ್ಯುತರಾವ್, ಆರ್. ರಘುನಾಥರಾವ್ ಮೊದಲಾದ ಪ್ರಮುಖಜನ ಆಗಾಗ ಸೇವೆ ಸಲ್ಲಿಸಿದ್ದರು. ಯಾವ ಹೊತ್ತಿನಲ್ಲೂ ನಿಜದಲ್ಲಿ ಪರಿಷತ್ತಿನ ದಿನದಿನದ ಕೆಲಸವನ್ನು ನಡಸುವುದೆಂದರೆ ಈ ಎರಡು ಸ್ಥಾನಗಳಲ್ಲಿ ನಿಲ್ಲುವ ಮಹನೀಯರೆ. ವಿದ್ಯಾವಂತರಲ್ಲಿ ಕೂಡ ಸಾಧ್ಯವಾದಷ್ಟು ಜಾಗ್ರತೆ ಇಲ್ಲದೆ ಸಂಸ್ಥೆ ನಡೆಯುವುದು ಕಷ್ಟವಾಗಿದ್ದ ಕಾಲದಲ್ಲಿ ಇದನ್ನು ನಡಸಿ ಉಳಿಸಿಕೊಂಡುಬಂದವರು ಇದರ ಕಾರ್ಯದರ್ಶಿಗಳು. ದಿವಂಗತ ರಾಜಸೇವಾಸಕ್ತ ಶ್ರೀ॥ ಬೆಳ್ಳಾವೆ ವೆಂಕಟನಾರಣಪ್ಪನವರು ಹೀಗೆ ಸಂಸ್ಥೆಯನ್ನು ಪೋಷಿಸಿ ನಿಲ್ಲಿಸಿದವರಲ್ಲಿ ಪ್ರಮುಖರು. ದಿವಂಗತ ಶ್ರೀ॥ ನಂಗಪುರಂ ವೆಂಕಟೇಶಯ್ಯಂಗಾರವರು ಈ ಕಾಲಗಳಲ್ಲಿ ಕೋಶಾಧಿಕಾರಿಯಾಗಿದ್ದು ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರಿಗೆ ಜೊತೆಯಾಗಿ ದುಡಿದರು. ಕೆಲವು ವರ್ಷ ಶ್ರೀ॥ ವೆಂಕಟೇಶಯ್ಯಂಗಾರವರು ಕಾರ್ಯದರ್ಶಿಗಳಾಗಿ ಶ್ರೀ॥ ವೆಂಕಟನಾರಣಪ್ಪನವರು ಕೋಶಾಧಿಕಾರಿಗಳಾಗಿ ಕೆಲಸ ಮಾಡಿದರು. ಇತ್ತೀಚೆಗ ಶ್ರೀ॥ ಗಳಾದ ಸಿ. ಕೆ. ವೆಂಕಟರಾಮಯ್ಯನವರು, ಎಸ್. ವಿ. ರಂಗಣ್ಣನವರು, ಬಿ. ವೆಂಕೋಬರಾಯರು, ಡಿ. ಸಿ. ಸುಬ್ಬರಾಯಪ್ಪನವರು, ವಿ. ಸೀತಾರಾಮಯ್ಯನವರು, ಕ.ವೆಂ. ರಾಘವಾಚಾರ್ಯರು, ಕೆ. ರೇವಣ್ಣನವರು, ಜಿ. ಪಿ. ರಾಜರತ್ನಂ ಇವರೇ ಮೊದಲಾದವರು ಕಾರ್ಯದರ್ಶಿಗಳಾಗಿಯೂ, ಕೋಶಾಧಿಕಾರಿಗಳಾಗಿಯೂ ಇದ್ದು ಸಹಾಯ ಮಾಡಿದ್ದಾರೆ.

ಪರಿಷತ್ತಿನಿಂದ ಈಗ ನಡೆಯುತ್ತಿರುವ ಮುಖ್ಯ ಕಾರ್ಯಗಳು ಇವು: ತ್ರೈಮಾಸಿಕ ಪರಿಷತ್ಪತ್ರಿಕೆ, ವಾರಪತ್ರಿಕೆ ಕನ್ನಡನುಡಿ ಇವುಗಳ ಪ್ರಕಟನೆ; ಕನ್ನಡ–ಕನ್ನಡಕೋಶ ನಿರ್ಮಾಣ; ಗಮಕಶಿಕ್ಷಣ; ಕನ್ನಡ ಪರೀಕ್ಷೆಗಳ ನಡೆವಳಿ; ವಸಂತಸಾಹಿತ್ಯೋತ್ಸವಗಳು; ನಿಧಿಗಳ ಉಪನ್ಯಾಸಗಳು; ಪ್ರಚಾರೋಪನ್ಯಾಸಗಳು; ಕಾವ್ಯವಾಚನ, ನಾಟಕಾಭಿನಯ, ಪ್ರಬಂಧರಚನೆ, ಮುಂತಾದ ಅಂಶಗಳಲ್ಲಿ ಸ್ಪರ್ಧೆಗಳು. ಪರಿಷತ್ಪತ್ರಿಕೆಯ ಉದ್ದೇಶ ಮುಖ್ಯವಾಗಿ ಅಭ್ಯಾಸಅನ್ವೇಷಣ ವಿಚಾರಪರವಾದ ಲೇಖನಗಳ ಸಂಗ್ರಹವಾಗಿರತಕ್ಕದ್ದು. ಇದಲ್ಲದೆ ಪರಿಷತ್ತು ಕನ್ನಡಿಗರಿಗೆ ಕನ್ನಡವನ್ನು ಕುರಿತ ಮುಖ್ಯವಾದ ಎಲ್ಲ ಸುದ್ದಿಯನ್ನೂ ಆಗಾಗ ಒದಗಿಸುವುದು ಆವಶ್ಯಕವೆಂದು ಕಂಡುಬಂದದ್ದರಿಂದ ಈಗ ಏಳು ವರ್ಷದ ಹಿಂದೆ ಕನ್ನಡ ನುಡಿಯ ಪ್ರಕಟನೆ ಮೊದಲಾಯಿತು. ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ, ಅದರಲ್ಲೂ ಮುಖ್ಯವಾಗಿ ಕನ್ನಡದ ಪಾಠ ಹೇಳುವ ಅಧ್ಯಾಪಕ ವರ್ಗಕ್ಕೆ, ಸಮಗ್ರವಾದ ಕನ್ನಡ ಶಬ್ದಕೋಶವೊಂದು ಆವಶ್ಯಕವೆಂದು ಕಂಡದ್ದರಿಂದ ಒಂದು ವರ್ಷದ ಹಿಂದೆ ಇದರ ಕೆಲಸವನ್ನು ಆರಂಭಿಸಿದ್ದಾಯಿತು. ಶ್ರೀ॥ ಸಂ. ಗೋ. ಬಿಂದೂರಾಯರು ಮೊದಮೊದಲಲ್ಲಿ ಅಲ್ಲಲ್ಲಿ ಕುಮಾರವ್ಯಾಸ ಭಾರತವನ್ನು ಗಮಕ ಪದ್ಧತಿಯಿಂದ ಓದಿ ತೋರಿಸಿ ಜನತೆಯಲ್ಲಿ ಈ ವಿಷಯ ಕುತೂಹಲ ಹೆಚ್ಚಿದ್ದರ ಫಲವಾಗಿ ತರುಣ ತರುಣಿಯರಿಗೆ ಈ ಕಲೆಯಲ್ಲಿ ಶಿಕ್ಷಣ ಕೊಡುವುದು ಆವಶ್ಯಕವೆಂದು ಕಂಡಿತು. ಈ ಮೊದಲೆ ಉಕ್ತವಾಗಿರುವಂತೆ ಈ ಕಾರ್ಯಕ್ಕೆ ಉತ್ತೇಜಕವಾಗಿ ಭಾಷಾಭಿಮಾನಿಗಳಿಂದ ದತ್ತಿಗಳು ಬಂದುವು. ಹೀಗಾಗಿ ಈಚೆಗೆ .ಬೆಂಗಳೂರು, ಧಾರವಾಡ, ಮೈಸೂರು, ಮಡಕೇರಿ, ಶಿವಮೊಗ್ಗ ಈ ಸ್ಥಳಗಳಲ್ಲಿ ಗಮಕ ಶಿಕ್ಷಣದ ತರಗತಿಗಳು ಆಗಾಗ ನಡೆದಿವೆ. ಬೆಂಗಳೂರಿನ ತರಗತಿ ವರ್ಷಂಪ್ರತಿ ನಡೆದಿದೆ. ಶಾಲೆಗೆ ಹೋಗಲಾರದ ಅಥವಾ ಶಾಲೆಗೆ ಹೋಗುತ್ತಿದ್ದು ಅಲ್ಲಿ ಕನ್ನಡವನ್ನು ಕಲಿಯುವ ಸನ್ನಿವೇಶದಲ್ಲಿಲ್ಲದ ವಯಸ್ಕ ಜನ ಕನ್ನಡ ಕಲಿಯುವಂತೆ ಪ್ರೋತ್ಸಾಹಿಸುವ ಸಲುವಾಗಿ ಸಾಹಿತ್ಯ ಪರೀಕ್ಷೆಗಳು ನಡೆಯುತ್ತಿವೆ. ಇದರಲ್ಲಿ ಅಣುಗ, ಕಾವ, ಜಾಣ ಎಂಬ ಮೂರು ಮೆಟ್ಟಲಿವೆ. ಪ್ರೌಢ ಅಭ್ಯಾಸಕ್ಕೆ ಗುರುತಾಗಿ ರನ್ನ ಎಂಬ ಪ್ರಶಸ್ತಿ ಪರೀಕ್ಷೆಯನ್ನು ಏರ್ಪಡಿಸುವ ಯೋಚನೆ ಇದೆ. ಹೊಸಕಾಲದ ಜ್ಞಾನಪ್ರಸಾರ ಕಾರ್ಯದಲ್ಲಿ ಉಪಾಧ್ಯಾಯರು ಮುಖ್ಯ ಭಾಗವನ್ನು ವಹಿಸಬೇಕಾಗಿರುವುದರಿಂದ ವಿಶೇಷವಾಗಿ ಅವರ ಉಪಯೋಗಕ್ಕಾಗಿ ಹತ್ತು ವರ್ಷಗಳ ಹಿಂದೆ ಒಂದು ಉಪನ್ಯಾಸಮಾಲೆ ಆರಂಭವಾಯಿತು. ಈಚೆಗೆ ಇದರ ಉದ್ದೇಶ ವಿಸ್ತಾರವಾಗಿ ಇಂಥ ಉಪನ್ಯಾಸಗಳು ಜಿಲ್ಲೆ, ತಾಲ್ಲೂಕು, ಹಳ್ಳಿ, ಸ್ಥಳಗಳಲ್ಲಿಯೂ ನಡೆದಿವೆ. ನಿಧಿಗಳಿಂದ ನಡೆಯಬೇಕಾಗಿರುವ ಉಪ

ನ್ಯಾಸಗಳು ಕ್ರಮವಾಗಿ ನಡೆಯುತ್ತ ಆಯಾ ದಾತೃಗಳ ಉದ್ದೇಶವನ್ನು ಕಾರ್ಯರೂಪಕ್ಕೆ ತಂದಿವೆ. ಇದಲ್ಲದೆ ಪ್ರಾಂತ ಪ್ರಾಂತಗಳ ಭಾಷಾಸೇವಕರ ಪರಿಚಯ ಲಾಭ ಮತ್ತು ಪಾಂಡಿತ್ಯದ ಪ್ರಯೋಜನವನ್ನು ಇತರ ಪ್ರಾಂತಗಳಿಗೆ ದೊರಕಿಸುವುದಕ್ಕಾಗಿ, ಹಾಗೆಯೇ ಜನಜಾಗೃತಿ ಉಂಟುಮಾಡುವುದಕ್ಕಾಗಿ, ಮತ್ತು ಗಡಿನಾಡಿನಲ್ಲಿ ಕನ್ನಡದ ರಕ್ಷಣೆಗಾಗಿ ಪ್ರಚಾರ ಉಪನ್ಯಾಸಗಳು ನಡೆಯುತ್ತಿವೆ. ಬರುವ ಕಾಲದ ಕನ್ನಡ ಸೇವಕರಾಗುವ ಇಂದಿನ ಎಳೆಯರಲ್ಲಿ ಭಾಷಾಭಿಮಾನ, ಕಾವ್ಯಜ್ಞಾನ, ಸಾಹಿತ್ಯಾಭಿರುಚಿ, ಲೇಖನ ಶಕ್ತಿಗಳನ್ನು ಉದ್ದೀಪಿಸುವುದಕ್ಕಾಗಿ ನಿಧಿಗಳ ಸಹಾಯದಿಂದ ಮತ್ತು ಇತರ ಧನ ವಿನಿಯೋಗದಿಂದ ಸ್ಪರ್ಧೆಗಳನ್ನು ನಡಸುತ್ತಿದೆ.

ಪರಿಷತ್ತಿನ ಕೆಲಸ ವಿಸ್ತಾರವಾದ ಕಾಲದಿಂದ ಆಯಾ ಪ್ರಾಂತದಲ್ಲಿ ಕೆಲಸವನ್ನು ನಿರ್ವಹಿಸುವುದಕ್ಕಾಗಿ ಈಗ ಏಳು ವರ್ಷಗಳಿಂದ ಪ್ರಾಂತ ಸಮಿತಿಗಳು ಏರ್ಪಟ್ಟಿವೆ.

ಇದೆಲ್ಲ ಮೂವತ್ತು ವರ್ಷದಿಂದ ನಡೆದಿರುವ ಕೆಲಸ, ಬೆಳೆದಿರುವ ಏರ್ಪಾಡು. ಇಷ್ಟರಿಂದೆಲ್ಲ ಸಾಧಿಸಿರುವ ಮುಖ್ಯ ಫಲವೆಂದರೆ ಕರ್ನಾಟಕದ ಹಾರ್ದಿಕ ಏಕೀಕರಣ. ಇದನ್ನು ಸಾಧಿಸಿದ ಮುಖ್ಯ ಸಾಧನ ವಾರ್ಷಿಕ ಸಾಹಿತ್ಯ ಸಮ್ಮೇಲನ.

ಮೂವತ್ತು ವರ್ಷದ ಹಿಂದೆ ಕನ್ನಡದ ಜನತೆ ಒಂದಾಗಬೇಕೆನ್ನುವುದು ಬಲ್ಲ ಮಂದಿಯ ಆಸೆ ಮಾತ್ರ ಆಗಿತ್ತು. ಈಗ ಇದು ಒಟ್ಟು ಜನತೆಯ ಆಸೆಯಾಗಿದೆ. ಆಂಗ್ಲರ ಅಧೀನದಲ್ಲಿರುವ ಕನ್ನಡ ಭೂಮಿಯನ್ನಲ್ಲದೆ ಸಂಸ್ಥಾನಗಳನ್ನೂ ಒಳಗೊಂಡು, ಯಾವುದೋ ಒಂದು ಪಂಗಡಕ್ಕೆ ರುಚಿಸುವುದು ಮಾತ್ರವಲ್ಲದೆ ಒಟ್ಟು ಜನತೆಗೇ ರುಚಿಸುವುದಾಗಿ, ಯಾವ ಒಂದು ಉದ್ಯೋಗ ಇತ್ಯಾದಿ ವಿಶಿಷ್ಟ ಕ್ಷೇತ್ರವನ್ನು ಉದ್ದೇಶಿಸದೆ ವಿಸ್ತಾರವಾದ ಜೀವನದ ಭೂಮಿಕೆಯನ್ನು ಹಿಡಿದು, ಸಾಹಿತ್ಯಸಮ್ಮೇಲನ ವರ್ಷ ವರ್ಷವೂ ಹೆಚ್ಚುಹೆಚ್ಚು ಜನದ ಮನಸ್ಸನ್ನು ನಾಡುನುಡಿಗಳ ಪ್ರೇಮಕ್ಕೆ ಸೆಳೆಯಿತು; ರಾಜಕೀಯವಾದ ಏಕೀಕರಣ ಒಂದಕ್ಕಾಗಿ ದುಡಿಯಬೇಕೆಂಬ ಪ್ರೇರಣೆಯನ್ನು ಮೂಡಿಸಿತು. ಆಮೇಲೆ ಕರ್ನಾಟಕ ಏಕೀಕರಣ ಸಂಘ ಏರ್ಪಟ್ಟು ಈಚೆಗೆ ರಾಜಕೀಯ ದೃಷ್ಟಿಯಿಂದ ನಡಸಬೇಕಾದ ಕಾರ್ಯವನ್ನು ಕೈಗೊಂಡಿದೆ; ಏಕೀಕರಣ ಸ್ಥಮ್ಮೇಲನ ಹಲವು ನೆರೆದು ಕನ್ನಡ ನಾಡನ್ನೆಲ್ಲ ಒಂದು ಆಡಳಿತದೊಳಗೆ ತರಬೇಕು, ಏನಿಲ್ಲವೆಂದರೂ ಈಗ ಆಂಗ್ಲ ಸರಕಾರದ ಕೈಯಲ್ಲಿರುವ ಭಾಗಗಳನ್ನಾದರೂ ಒಂದುಗೂಡಿಸಬೇಕು ಎಂಬ ಗುರಿಯ ಕಡೆಗೆ ದಿಟ್ಟವಾಗಿ ನಡೆಯುತ್ತಿದೆ. ಕನ್ನಡದ ನಡೆಯ ಮನಸ್ಸನ್ನು ಈ ನಿಟ್ಟಿಗೆ ತರುವುದಕ್ಕೆ ಎಲ್ಲ ಪ್ರಾಂತದ ಪ್ರಮುಖರೂ ಪರಿಷತ್ತಿನ ಮೂಲಕ ಸಾಹಿತ್ಯ ಸಮ್ಮೇಲನಗಳನ್ನು ನೆರಸಿದ್ದು ಮುಖ್ಯ ಸಾಧನ ಆಯಿತು.

ಕನ್ನಡದ ಸ್ಥಿತಿ ಮೂವತ್ತು ವರುಷದಿಂದೀಚೆಗೆ ಸ್ವಲ್ಪವೇನೋ ಉತ್ತಮಗೊಂಡಂತೆ ಕಂಡರೂ, ಆಗಬೇಕಾದ ಕೆಲಸ ಬಹಳ ಉಳಿದಿದೆ. ಕನ್ನಡದ ಜನತೆ ನೂರಕ್ಕೆ ತೊಂಬತ್ತರಷ್ಟು ಇರುವ ಕನ್ನಡ ಪ್ರಾಂತಗಳಲ್ಲಿ ಕೂಡ ಕನ್ನಡಕ್ಕೆ ಇನ್ನೂ ಸರಿಯಾದ ಸ್ಥಾನ ದೊರೆತಿಲ್ಲ. ಮೈಸೂರು ಸಂಸ್ಥಾನದಲ್ಲಿ, ಕಚೇರಿ ಶಾಲೆಗಳಲ್ಲಿ ಕನ್ನಡ ಉಂಟು, ಆದರೆ ಎಲ್ಲ ಕಡೆಯೂ ಉಚ್ಚಸ್ಥಾನ ಇಂಗ್ಲೀಷಿನದಾಗಿದೆ. ಹೈದರಾಬಾದು ಸಂಸ್ಥಾನದಲ್ಲಿ ಈ ಉಚ್ಚಸ್ಥಾನ ಉರ್ದು ಭಾಷೆಗೆ ಸೇರಿದೆ. ಜಮಖಂಡಿಯಂಥ ಸಂಸ್ಥಾನದಲ್ಲಿ ಅದು ಮರಾಠಿ ಭಾಷೆಯ ಪಾಲಾಗಿದೆ. ಬೆಳಗಾಂವಿ ಧಾರವಾಡಗಳಲ್ಲಿ ಮರಾಠಿ ಕನ್ನಡಕ್ಕೆ ಪ್ರತಿಸ್ಪರ್ಧಿ ಎಂಬಂತೆ ನಿಲ್ಲುತ್ತದೆ. ಬಳ್ಳಾರಿಯಲ್ಲಿ ತೆಲುಗು ಈ ನಡತೆಯನ್ನು ವಹಿಸುತ್ತಿದೆ. ಸ್ವಲ್ಪ ಸ್ವಲ್ಪ ಪ್ರಜೆಗಳ ಭಾಷೆಯಾಗಿದ್ದು ಇದುವರೆಗೆ ಕನ್ನಡಕ್ಕೆ ಅನುಕೂಲವಾಗಿ ನಡೆದುಕೊಂಡ ಕೊಂಕಣಿ ತುಳು ಭಾಷೆಗಳನ್ನು ಕನ್ನಡದ ಎದುರುಕಕ್ಷಿಗಳೆಂದು ನಿಲ್ಲಿಸಲು ಕೆಲವರು ಮಹನೀಯರು ಯತ್ನ ಮಾಡುತ್ತಿದಾರೆ. ಈ ಎಲ್ಲ ಮಾತಿನ ಸಾರಾಂಶ ಕನ್ನಡ ದೇಶದಲ್ಲಿ ಕನ್ನಡ ಭಾಷೆಗೆ ತಕ್ಕ ಸ್ಥಾನ ಇನ್ನೂ ದೊರೆತಿಲ್ಲ ಎನ್ನುವುದು. ಇದಕ್ಕೆ ಮುಖ್ಯ ಕಾರಣ ಕನ್ನಡಿಗರ ತಿಳಿವಳಿಕೆ ಇನ್ನೂ ಸ್ವಚ್ಛವಾಗಿಲ್ಲ, ಕನ್ನಡಿಗರಲ್ಲಿ ಸಾಕಾದಷ್ಟು ಜನ ನಾಡ ಶುಭಕ್ಕಾಗಿ ಹಂಬಲಿಸುತ್ತಿಲ್ಲ, ಕನ್ನಡಿಗರ ಭಾಷಾಭಿಮಾನ ತಕ್ಕಂತೆ ಕಾರ್ಯರೂಪಕ್ಕೆ ಬಂದಿಲ್ಲ, ಎನ್ನುವುದು. ಕನ್ನಡ ದೇಶದಲ್ಲೆಲ್ಲ ಎಲ್ಲ ಕಚೇರಿಗಳಲ್ಲೂ ಕನ್ನಡ ಮುಖ್ಯ ಭಾಷೆಯಾಗಿ ನಡೆಯಬೇಕು. ಕನ್ನಡ ದೇಶದ ಎಲ್ಲ ಮಟ್ಟದ ವಿದ್ಯಾಭ್ಯಾಸವೂ ಕನ್ನಡದ ಮೂಲಕ ನಡೆಯಬೇಕು. ಕನ್ನಡದಲ್ಲಿ ಎಲ್ಲ ಸಾರ್ವಜನಿಕ ಜೀವನವೂ ಕನ್ನಡದಲ್ಲಿ ನಡೆಯಬೇಕು. ಕನ್ನಡ ದೇಶದ ಬಲ್ಲಮಂದಿ ತಮ್ಮ ಸಮಸ್ತ ವ್ಯವಹಾರದಲ್ಲಿಯೂ ಸಹಜ

ವಾಗಿ ಕನ್ನಡವನ್ನೇ ಬಳಸುವ ಸ್ಥಿತಿ ಬರಬೇಕು. ಇದೇ ಕನ್ನಡ ಜನಕ್ಕೆ ತಕ್ಕ ಗುರಿ. ದೇಶಕ್ಷೇಮವನ್ನು ಬಯಸುವ ಎಲ್ಲರೂ ಈ ಗುರಿಯನ್ನು ಇಟ್ಟುಕೊಂಡು ದುಡಿದು ಜನಸಾಮಾನ್ಯದ ಮನಸ್ಸನ್ನೂ ಇತರ ಭಾಷೆಗಳ ವಿಷಯದಲ್ಲಿ ಪಕ್ಷಪಾತಿಗಳಾಗಿ ಇರುವವರ ಮನಸ್ಸನ್ನೂ ಸರಕಾರಗಳ ಮನಸ್ಸನ್ನೂ ಈ ಕಾರ್ಯಕ್ಕೆ ಸುಮುಖವಾಗುವಂತೆ ತಿರಿಗಿಸಿಕೊಳ್ಳಬೇಕು. ಇದೇ ಇಂದಿನ ಕರ್ತವ್ಯದ ತಿರುಳು.

ಕನ್ನಡ ಸಾಹಿತ್ಯ ಪರಿಷತ್ತು ಎಲ್ಲ ಪ್ರಾಂತದ ಕನ್ನಡಿಗರೂ ಸೇರಿ ಒಟ್ಟು ಜನದ ಒಟ್ಟು ಬಾಳುವೆಯ ಮೇಲ್ಮೆಗಾಗಿ ನಿರ್ಮಿಸಿ ಬೆಳೆಸಿರುವ ಏಕಮಾತ್ರ ಸಂಸ್ಥೆ. ಈ ಸಂಸ್ಥೆ ಇಂಥ ಅಂಥ ಕೆಲಸವನ್ನು ಮಾಡಬೇಕೆಂದು, ಮಾಡಲಿಲ್ಲ ಎಂದು, ಕೆಲವರು ಆಗಾಗ ಹೇಳುವುದುಂಟು. ಕನ್ನಡ ಜನ ಮಾಡಬೇಕಾದ ಕೆಲಸ, ಮಾಡದೆ ಬಿಟ್ಟಿರುವ ಕೆಲಸ, ಇಂಥವು ನೂರು ಇವೆ. ಜನತೆಯ ಪ್ರಮುಖರು ತಮಗೆ ತೋರಿದ ಅಂಥ ಕೆಲಸವನ್ನು ತಾವು ಮಾಡದೆ, ಅಥವಾ ಮಾಡುವುದಕ್ಕೆ ಇತರರಿಗೆ ನೆರವನ್ನು ನೀಡದೆ, ಸಂಸ್ಥೆ ಆ ಕೆಲಸವನ್ನು ಮಾಡಲಿಲ್ಲ ಎನ್ನುವುದು ವಿಚಿತ್ರ ಎನ್ನಬೇಕು. ಈಗಲೂ ಸಂಸ್ಥೆಗೆ ಜನ ಸಹಾಯ ಸಾಲದು; ಧನ ಸಹಾಯ ಸಾಲದು. ಇನ್ನು ಕೆಲವು ವೇಳೆ ಒಬ್ಬಿಬ್ಬರು ಕನ್ನಡಕ್ಕೆ ಇಂಥ ಸಂಸ್ಥೆ ಬೇಕು ಅಂಥ ಸಂಸ್ಥೆ ಬೇಕು ಎಂದು ಆದರ್ಶಗಳನ್ನು ಒದಗಿಸುತ್ತಾರೆ; ಪರಿಷತ್ತು ಅಂಥ ಸಂಸ್ಥೆ ಆಗಲಿಲ್ಲವಾದ್ದರಿಂದ ಬೇರೆ ಸಂಸ್ಥೆ ಒಂದನ್ನು ನಿರ್ಮಿಸಬೇಕೆಂಬಂತೆ ಮಾತನಾಡುತ್ತಾರೆ. ಈ ಮೂವತ್ತು ವರ್ಷದ ಅನುಭವದ ಫಲವಾಗಿ ಇನ್ನು ಮುಂದೆ ಪರಿಷತ್ತಿಗಿಂತ ಒಳ್ಳೆಯ ಸಂಸ್ಥೆಗಳು ಬರಬಹುದು, ಬರಬೇಕು. ಆದರೆ ಅದಕ್ಕೆ ಕೂಡ ಪರಿಷತ್ತಿನ ಮೂವತ್ತು ವರ್ಷದ ಕೆಲಸ ಹಿಂಬದಿ ತಳಹದಿ ಎನ್ನುವುದನ್ನು ನಾವು ನೆನೆವಿಡಬೇಕು. ಈ ಸಂಗತಿಯನ್ನು ಗ್ರಹಿಸಿರುವವರು ಕನ್ನಡದ ಒಟ್ಟು ಜನತೆಗೆ ಮೇಲ್ಮೆಯ ಸಾಧನವಾಗಿ ಸದ್ಯಕ್ಕೆ ಬೇರೊಂದು ಸಂಸ್ಥೆ ಆಗಬೇಕೆಂದು ಹೇಳಲಾರರು. ಮೂವತ್ತು ವರ್ಷಗಳನ್ನು ಕಂಡಿರುವ ಈ ಸಂಸ್ಥೆ ತಕ್ಕ ಜನ ಸಹಾಯ ಧನ ಸಹಾಯ ದೊರೆತರೆ ಆ ಹೊಸ ಸಂಸ್ಥೆ ಮಾಡಬಹುದಾದ ಕಾರ್ಯವನ್ನು ಅದಕ್ಕಿಂತ ಚೆನ್ನಾಗಿ ಮಾಡಬಲ್ಲದು. ಹೊಸ ಸಂಸ್ಥೆಗಳನ್ನು ಕಟ್ಟುವುದು ಅಷ್ಟೇನೂ ಸುಲಭವಲ್ಲ. ಕನ್ನಡ ಜನದ, ಕನ್ನಡ ಮನದ, ಇದುವರೆಗಿನ ಸ್ಥಿತಿಯಲ್ಲಿ ಎಷ್ಟು ಸಾಧ್ಯವಾಗಿತ್ತೆನ್ನುವುದನ್ನು ಪರಿಷತ್ತೇ ತೋರಿಸುತ್ತಿದೆ. ಮುಂದಾದರೂ ಪರಿಷತ್ತು ಜನತೆಯ ಬಯಕೆಯನ್ನು ಕಾರ್ಯರೂಪಕ್ಕೆ ತರುವ ಶಕ್ತಿವಂತ ಸಾಧನವಾಗಬಹುದು. ಅದನ್ನು ಹಾಗೆ ಮಾಡಿಕೊಳ್ಳುವ ಭಾರ ಕನ್ನಡ ಜನತೆಯನ್ನು ಸೇರಿದೆ.

ಈ ಉದ್ದೇಶವನ್ನು ಸಾಧಿಸುವ ಆಸೆಯಿಂದ ಇದೀಗ ಪರಿಷತ್ತಿನ ರಚನೆಯಲ್ಲಿ ಒಂದು ಮುಖ್ಯವಾದ ಮಾರ್ಪಾಡನ್ನು ಮಾಡುವ ಯೋಜನೆ ಪರಿಶೀಲನೆಗೆ ಬರುವುದರಲ್ಲಿದೆ. ಈ ಯೋಜನೆ ಬರುವ ಸಕಲ ಸದಸ್ಯರ ವಿಶೇಷಾಧಿವೇಶನದಲ್ಲಿ ಒಪ್ಪಿಗೆಪಡೆದರೆ ಕನ್ನಡನಾಡಿನಲ್ಲಿ ಹದಿನಾರು ಪ್ರದೇಶಗಳು ಏರ್ಪಟ್ಟು ಒಂದೊಂದು ಪ್ರದೇಶಕ್ಕೂ ಒಂದು ಸಮಿತಿ ಇರುತ್ತ ಒಂದೊಂದು ಸಮಿತಿಯೂ ತನ್ನ ಕ್ಷೇತ್ರದಲ್ಲಿ ತೀವ್ರವಾಗಿ ಕೆಲಸಮಾಡಲು ಅನುಕೂಲ ದೊರೆಯುತ್ತದೆ. ಕನ್ನಡದ ಏಳ್ಗೆ ಬರಿಯ ಭಾಷೆಯ ಏಳ್ಗೆಯಲ್ಲ; ಜೀವನದ ಏಳ್ಗೆ. ಜೀವನದ ಏಳ್ಗೆ ಬರಿಯ ಸಾಹಿತ್ಯದ ಏಳ್ಗೆಯಲ್ಲ. ಸಾಹಿತ್ಯ ಒಂದು ಸಾಧನ, ಒಂದು ಲಕ್ಷಣ. ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಆದ ಏಳ್ಗೆ ಸಾಹಿತ್ಯದಿಂದ ಹುಟ್ಟಿ ಸಾಹಿತ್ಯವನ್ನು ಪ್ರೇರಿಸಿದಾಗ ಮಾತ್ರ ಜೀವನ ಏಳ್ಗೆಯನ್ನು ಪಡೆಯಿತೆನ್ನಬಹುದು. ಸಾಹಿತ್ಯ ಪರಿಷತ್ತಿನ ಭೂಮಿಕೆಯಲ್ಲಿ ಈ ಎಲ್ಲ ರೀತಿಯ ಏಳ್ಗೆಗಾಗಿ ಎಲ್ಲ ಅಭಿಪ್ರಾಯಗಳ ಜನರೂ ಒಂದುಗೂಡಿ ದುಡಿಯಬಹುದು. ತೀವ್ರಪಕ್ಷದವರು ನೆರೆದಲ್ಲಿ ಮತವಾದಿಗಳು ದೂರನಿಲ್ಲುವ ರಾಜಕೀಯ ರಂಗ ಇದಲ್ಲ. ತಾವು ಸನಾತನ ಧರ್ಮಿಗಳೆಂದುಕೊಳ್ಳುವವರು ಸಂಪ್ರದಾಯದ ರಕ್ಷಣೆಗಾಗಿ ಸಭೆ ಸೇರಿದಾಗ ಸುಧಾರಕವೃಂದ ದೂರ ನಿಲ್ಲಬೇಕಾದ ರಂಗವೂ ಇದಲ್ಲ. ಇಂದಿನ ಆರ್ಥಿಕವ್ಯವಸ್ಥೆ ತಕ್ಕ ಮಾರ್ಪಾಡುಗಳೊಡನೆ ಮುಂದಕ್ಕೂ ನಡೆಯಬಹುದು ಎನ್ನುವವರು ಕೂಡಿದಾಗ ಅವರನ್ನು ಪ್ರತಿಭಟಿಸಿ ಸೋವಿಯಟ್ ಪದ್ಧತಿಯನ್ನೇ ಸರಿ ಎನ್ನುವವರು ದೂರನಿಲ್ಲುವ ರಂಗವಾದರೂ ಇದಲ್ಲ. ಜೈನ, ಬೌದ್ಧ, ವೀರಶೈವ, ಇಸ್ಲಾಂ, ಕ್ರೈಸ್ತ, ನಿರೀಶವಾದಿಗಳು ಒಬ್ಬರನ್ನೊಬ್ಬರು ಸೇರಲಾಗದೆ ತೊರೆಯಬೇಕಾದ ರಂಗವೂ ಇದಲ್ಲ. ಬೇರೆ ಬೇರೆಯ ಆಯಾ ಕ್ಷೇತ್ರದಲ್ಲಿ ಒಬ್ಬರನ್ನೊಬ್ಬರು ಎದುರಿಸುವ ದೇಶಸೇವಕರು ಈ ಸಂಸ್ಥೆಯಲ್ಲಿ ಜೊತೆಜೊತೆಯಲ್ಲಿ ಕೂಡಬಹುದು;

# ಒಳ್ಳೆಯ ರಸ್ತೆಗಳು
# ಅಭಿವೃದ್ಧಿಗೆ ಮಾರ್ಗಗಳು

ಸಾಕಷ್ಟು ರಸ್ತೆಗಳಿಲ್ಲದೆ ಭರತ ಖಂಡದ ಏಳು ಲಕ್ಷ ಹಳ್ಳಿಗಳು ಬಿಡಿಬಿಡಿಯಾಗಿ ಉಳಿದುಬಿಟ್ಟಿವೆ. ಹಳ್ಳಿಯವರು ಹೆಚ್ಚು ಆಹಾರವನ್ನು ಬೆಳೆದರೆ ಅದನ್ನು ಪೇಟೆಗೆ ಒಯ್ಯಲು ದಾರಿಯಿಲ್ಲ. ರಸ್ತೆಗಳು ಏರ್ಪಟ್ಟಾಗ ಹೆಚ್ಚು ಬೆಳೆ ಬೆಳೆಯುವುದು ಸಾಧ್ಯವಾಗುವುದೊಂದೇ ಅಲ್ಲದೆ ಹಳ್ಳಿಯವರು ಕೈಗಾರಿಕೆ ವಸ್ತುಗಳನ್ನು ಕೊಳ್ಳುವುದಕ್ಕೂ ಸಾಧ್ಯವಾಗುತ್ತದೆ. ಬೇಸಾಯವೂ, ಕೈಗಾರಿಕೆಯೂ ಒಂದನ್ನೊಂದು ಅವಲಂಬಿಸಿವೆ; ಒಂದರ ಬೆಳವಣಿಗೆಯ ಮೇಲೆ ಇನ್ನೊಂದರ ನೆಮ್ಮದಿ ನಿಂತಿದೆ.

ಹೆಚ್ಚು ರಸ್ತೆಗಳ ಏರ್ಪಾಟಿಗೂ
ಹೆಚ್ಚು ಬೆಳೆ ಬೆಳೆಯುವುದಕ್ಕೂ
ಉತ್ತೇಜನ ಕೊಡುವುದಕ್ಕಾಗಿ

## "ಬರ್ಮಾ ಷೆಲ್"

ಅವರಿಂದ



ತಮ್ಮ ತಮ್ಮ ವಿಚಾರವನ್ನು ಜನರ ಮುಂದೆ ಮಂಡಿಸಬಹುದು; ನಾಡನುಡಿಯು ಏಳ್ಗೆ ಎನ್ನುವುದು ಯಾವ ಒಂದು ಸಂಗಡಮಾತ್ರದ ಸ್ವತ್ತಲ್ಲ ಎನ್ನುವುದನ್ನು ಕಾಣಬಹುದು, ತೋರಬಹುದು.

ಪರಿಷತ್ತಿನ ಹೊಸ ರಚನೆಯಿಂದ ಈ ಅರಿವು ಕನ್ನಡದ ಜನದಲ್ಲೆಲ್ಲ ಹರಡಿ ಅದರ ಸದಸ್ಯ ಸಂಪತ್ತು ತಕ್ಕಷ್ಟು ಬೆಳೆದು ಎಲ್ಲ ಶ್ರದ್ಧಾವಂತ ದೇಶಸೇವಕರು, ಭಾಷಾಸೇವಕರು ಏಕಕಾಲದಲ್ಲಿ ಐಕಮತ್ಯದಿಂದ ಜನದ ಶುಭಕ್ಕಾಗಿ ದುಡಿಯುವಂತಾಗಲೆಂದು ಹಿರಿಯರು ಅನುಗ್ರಹಿಸಬೇಕಾಗಿದೆ. ಈ ಸಲದ ಸಮ್ಮೇಲನ ಮದರಾಸಿನಲ್ಲಿ ನಡೆಯುತ್ತದೆ. ಕನ್ನಡ ಸಾಹಿತ್ಯ ಸಮ್ಮೇಲನ ಮದರಾಸಿನಲ್ಲಿ ನಡೆಯುವುದು ಇದೇ ಮೊದಲ ಸಲ. ಸಮ್ಮೇಲನದಲ್ಲಿ ವಿಚಾರಕ್ಕೆ ಬರಬೇಕಾದ ಮುಖ್ಯ ಸಂಗತಿ ಹಲವಿವೆ. ಕನ್ನಡದ ಇತರ ಪ್ರಾಂತಗಳ ಸಮಸ್ಯೆಗಳೇ ಅಲ್ಪ ಸ್ವಲ್ಪ ಮಾರ್ಪಟ್ಟು, ಮದರಾಸು ಕನ್ನಡಿಗರ ಸಮಸ್ಯೆಗಳು. ಮದರಾಸು ಆಧಿಪತ್ಯದ ಕನ್ನಡ ಪ್ರಾಂತದಲ್ಲಿ ನಾವು ಕನ್ನಡಕ್ಕೆ ಸರಿಯಾದ ಸ್ಥಾನವನ್ನು ಗಳಿಸಬೇಕಾಗಿದೆ. ಮದರಾಸು ನಗರದಲ್ಲಿ, ಬಳ್ಳಾರಿ, ಅನಂತಪುರ, ಹೊಸೂರು, ಕೊಳ್ಳೇಗಾಲ ಮುಂತಾದಲ್ಲಿ, ಕನ್ನಡದ ಶಿಕ್ಷಣಕ್ಕೆ ಏರ್ಪಾಡು ಮಾಡುವಂತೆ ಸರಕಾರವನ್ನೂ ಸ್ಥಳೀಯ ಸಂಸ್ಥೆಗಳನ್ನೂ ಕೇಳಬೇಕಾಗಿದೆ. ಬಳ್ಳಾರಿ ಜಿಲ್ಲೆ ಪೂರ್ತಿಯಾಗಿ ಅಥವಾ ಬಹುಮಟ್ಟಿಗೆ ಕನ್ನಡ ಭೂಮಿಯೆಂದು ತೋರಿಸಲು ಏರ್ಪಡಿಸಬೇಕಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಲೆಯಾಳಿ, ತುಳು, ಕೊಂಕಣಿ ಭಾಷೆಗಳನ್ನು ಹೊಂದಿಸಿಕೊಂಡು ಕನ್ನಡದ ಪ್ರಾಮುಖ್ಯವನ್ನು ಕಾದುಕೊಳ್ಳಬೇಕಾಗಿದೆ. ಮದರಾಸು ಪ್ರಾಂತದ ರೇಡಿಯೋ ಸ್ಟೇಷನ್ನುಗಳಲ್ಲಿ ಕನ್ನಡಕ್ಕೆ ಹೆಚ್ಚು ಅವಕಾಶವನ್ನು ಸಂಪಾದಿಸಬೇಕಾಗಿದೆ. ಕನ್ನಡದ ಮುಂಬರಿವಿಗೆ ಆವಶ್ಯಕವಾದ ಇನ್ನು ಇಂಥ ಎಲ್ಲ ವಿವರದಲ್ಲಿಯೂ ಸಮ್ಮೇಲನ ಯುಕ್ತನಿರ್ಧಾರಗಳಿಗೆ ಬಂದು ಆಧಿಪತ್ಯದ ಕನ್ನಡಿಗರಿಗೆ ಮುಂದಿನ ಕಾರ್ಯಕ್ರಮವನ್ನು ನಿರ್ದೇಶಿಸಬೇಕು. ಈ ಉದ್ದೇಶದಿಂದ ಮದರಾಸಿನ ಕನ್ನಡಿಗರೊಂದಿಗೆ ಉಳಿದೆಲ್ಲ ಪ್ರಾಂತದ ಕನ್ನಡಿಗರೂ ಸಹಕರಿಸಬೇಕು.

ನಾಡಹಿರಿಯರು ಎಲ್ಲ ಕಡೆಯವರೂ ನೂರಾರುಮಂದಿ ಕನ್ನಡದ ಶುಭಕ್ಕಾಗಿ ಈವರೆಗೆ ಪರಿಷತ್ತಿನಲ್ಲಿ ದುಡಿದಿದ್ದಾರೆ. ಕೆಲಸ ಮಾಡಿದವರೆಲ್ಲರ ಹೆಸರನ್ನೂ ಮೇಲೆ ಹೇಳಿಲ್ಲ. ಹೆಸರು ಹೇಳಿರುವ, ಹೇಳದೆಬಿಟ್ಟಿರುವ, ಆ ಎಲ್ಲ ಹಿರಿಯರಿಗೂ ಗೆಳೆಯರಿಗೂ ನಾವು ವಂದನೆ ಒಪ್ಪಿಸಬೇಕು. ಸಂಸ್ಥೆಯ ಇಂದಿನ ನಿರ್ವಾಹಕರ ಪರವಾಗಿ ನಾನು ಆ ವಂದನೆಯನ್ನು ನಮ್ರನಾಗಿ ಒಪ್ಪಿಸುತ್ತೇನೆ. ಈ ಹಿರಿಯರೂ ಗೆಳೆಯರೂ ಹಾಕಿಕೊಟ್ಟ ದಾರಿಯೇ ನಮ್ಮ ಏಳ್ಗೆಗೆ ದಾರಿ. ಕನ್ನಡಜನ ಎನಿಸಿಕೊಳ್ಳುವುದರ ಹೆಮ್ಮೆ ಅರಿತ ಇಂದಿನ ನಾವು ಈ ದಾರಿಯಲ್ಲಿ ಸೋಲದೆ ನಡೆಯೋಣ. ಮೂವತ್ತು ವರ್ಷದಲ್ಲಿ ನಾವು ಗುರಿಮುಟ್ಟಿಲ್ಲ; ಆದರೆ, ಗುರಿಯ ಕಡೆಗೆ ಸ್ವಲ್ಪ ಸಾಗಿರುವುದು ನಿಜ. ಇನ್ನೂ ಸಾಗಬೇಕಾದ ದಾರಿ ಬಹಳವಿದೆ. ಕೆಡುಕನ್ನು ನುಡಿಯದೆ, ಒಡಕನ್ನು ತಾರದೆ, ಕನ್ನಡದ ಕಲ್ಯಾಣಕ್ಕೆಂದು ಒಟ್ಟಿಗೆ ನಡೆಯುವುದೇ ನಮಗೆ ಶ್ರೇಯಸ್ಸು. ನಾವೆಲ್ಲ ಹೀಗೆ ನಡೆಯುವಂತೆ ಕನ್ನಡದ ದೈವ ಅನುಗ್ರಹಿಸಲಿ.

## ಈ ಮೂವತ್ತು ವರ್ಷಗಳ ಪರಿಷತ್ತಿನ ಅಧಿಕಾರಿಗಳ ಪಟ್ಟಿ

### ೧. ಅಧ್ಯಕ್ಷರು

೧. ರಾಜಮಂತ್ರಪ್ರವೀಣ
ಎಚ್. ವಿ. ನಂಜುಂಡಯ್ಯನವರು,
ಎಂ.ಎ., ಎಂ.ಎಲ್., ಸಿ.ಐ.ಇ. .. ೧೯೧೫–೧೯

೨. ರಾಜಸೇವಾಧುರೀಣ
ಸರ್ ಎಂ. ಕಾಂತರಾಜ ಅರಸರವರು,
ಬಿ.ಎ., ಸಿ.ಎಸ್.ಐ. .. ೧೯೨೦–೨೪

೩. ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್,
ಜಿ.ಸಿ.ಐ.ಇ. ಅವರು ೧೯೨೫–೪೦

೪. ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರು ೧೯೪೦

೫. ಒಂಟಿಮುರಿಯ ಶ್ರೀಮಂತ ಬಸವಪ್ರಭು ರಾಜಾ ಲಖಮಗೌಡ ಸರ್ ದೇಸಾಯಿ, ಒ.ಬಿ.ಇ. ಅವರು .. ೧೯೪೧

### ೨. ಉಪಾಧ್ಯಕ್ಷರು

೧. ರಾಜಕಾರ್ಯಪ್ರಸಕ್ತ ರಾವ್ ಬಹದ್ದೂರ್ ಎಂ. ಶಾಮರಾಯರು, ಎಂ.ಎ. .. ೧೯೧೫–೧೯
೨. ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು, ಬಿ.ಎಸ್‌ಸಿ., ಎಲ್.ಸಿ.ಇ. .. ೧೯೨೦–೩೩
೩. ಶ್ರೀ॥ ಡಿ. ವಿ. ಗುಂಡಪ್ಪನವರು .. ೧೯೩೪–೩೭
೪. ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್. ೧೯೩೮–೪೨
೫. ರಾಜಸೇವಾಪ್ರಸಕ್ತ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ೧೯೪೩

### ೩. ಕಾರ್ಯದರ್ಶಿಗಳು

೧. ಶ್ರೀ॥ ಬಿ. ಕೃಷ್ಣಪ್ಪನವರು, ಎಂ.ಎ. ೧೯೧೫–೧೬
೨. ,, ಬಿ. ವೆಂಕಟನಾರಣಪ್ಪನವರು, ಎಂ.ಎ. .. ೧೯೧೬
೩. ,, ಆರ್. ರಘುನಾಥರಾಯರು, ಬಿ.ಎ. ೧೯೧೭–೧೮
೪. ಡಾ॥ ಪಿ. ಎಸ್. ಅಚ್ಯುತರಾಯರು, ೧೯೧೭–೧೮
೫. ಶ್ರೀ॥ ಎಂ. ಎಸ್. ಪುಟ್ಟಣ್ಣನವರು, ಬಿ.ಎ. .. ೧೯೧೮–೧೯
೬. ,, ನಂ. ವೆಂಕಟೇಶ ಅಯ್ಯಂಗಾರವರು, ಬಿ.ಎ. .. ೧೯೧೯–೨೧
೭. ,, ಬಿ. ವೆಂಕಟನಾರಣಪ್ಪನವರು, ಎಂ.ಎ. .. ೧೯೨೨–೨೬
೮. ,, ನಂ. ವೆಂಕಟೇಶ ಅಯ್ಯಂಗಾರವರು, ಬಿ.ಎ. ... ೧೯೨೭–೩೦
೯. ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. .. ೧೯೩೦–೩೬
೧೦. ,, ಎಸ್. ವಿ. ರಂಗಣ್ಣನವರು, ಎಂ.ಎ. .. ೧೯೩೭–೩೮
೧೧. ,, ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ. .. ೧೯೩೮–೩೯
೧೨. ,, ಬಿ. ವೆಂಕೋಬರಾಯರು, ಬಿ.ಎ. ೧೯೪೦
೧೩. ಶ್ರೀ॥ ಕ. ವೆಂ. ರಾಘವಾಚಾರ್ಯರು, ಎಂ.ಎ., ಬಿ.ಟಿ. .. ೧೯೪೨
೧೪. ,, ಬಿ. ವೆಂಕೋಬರಾಯರು, ಬಿ.ಎ. ೧೯೪೩
೧೫. ,, ಕ. ವೆಂ. ರಾಘವಾಚಾರ್ಯರು, ಎಂ.ಎ., ಬಿ.ಟಿ. .. ೧೯೪೪
೧೬. ,, ಕೆ. ರೇವಣ್ಣನವರು .. ೧೯೪೫

### ೪. ಕೋಶಾಧಿಕಾರಿಗಳು

೧. ಡಾ॥ ಪಿ. ಎಸ್. ಅಚ್ಯುತರಾಯರು ೧೯೧೫–೧೬
೨. ಶ್ರೀ॥ ಟಿ. ಲಕ್ಷ್ಮೀನರಸಿಂಹರಾಯರು ೧೯೧೭–೧೮
೩. ,, ನಂ. ವೆಂಕಟೇಶ ಅಯ್ಯಂಗಾರವರು, ಬಿ.ಎ. .. ೧೯೧೮–೧೯
೪. ,, ಬಿ. ವೆಂಕಟನಾರಣಪ್ಪನವರು, ಎಂ.ಎ. .. ೧೯೨೦–೨೧
೫. ,, ನಂ. ವೆಂಕಟೇಶ ಅಯ್ಯಂಗಾರವರು, ಬಿ.ಎ. .. ೧೯೨೨–೨೬
೬. ,, ಬಿ. ವೆಂಕಟನಾರಣಪ್ಪನವರು, ಎಂ.ಎ. .. ೧೯೨೭–೩೩
೭. ಶ್ರೀ॥ ವಿ. ಸೀತಾರಾಮಯ್ಯನವರು, ಎಂ.ಎ. .. ೧೯೩೪–೩೯
೮. ,, ಡಿ. ಸಿ. ಸುಬ್ಬರಾಯಪ್ಪನವರು, ಬಿ.ಎ., ಬಿ.ಎಲ್. .. ೧೯೪೦–೪೪
೯. ,, ಜಿ. ಪಿ. ರಾಜರತ್ನಂ ಅವರು, ಎಂ.ಎ. .. ೧೯೪೫

### ಪರಿಷತ್ ಪತ್ರಿಕೆ

ಹಿಂದೆ ನಡಸಿದವರು :

ದಿವಂಗತ ಶ್ರೀ॥ ಆರ್. ರಘುನಾಥರಾಯರು, ಶ್ರೀ॥ ನಂಗಪುರಂ ವೆಂಕಟೇಶ ಅಯ್ಯಂಗಾರರು, ರಾಜಸೇವಾಸಕ್ತ ಶ್ರೀ॥ ಬೆಳ್ಳಾವೆ ವೆಂಕಟನಾರಣಪ್ಪನವರು ; ಶ್ರೀಗಳಾದ ಎ. ಆರ್. ಕೃಷ್ಣಶಾಸ್ತ್ರಿಗಳು, ಡಿ. ಸಿ. ಸುಬ್ಬರಾಯಪ್ಪನವರು, ವಿ. ಸೀತಾರಾಮಯ್ಯನವರು, ಎಂ. ಆರ್. ಶ್ರೀನಿವಾಸಮೂರ್ತಿಗಳು, ಕ. ವೆಂ. ರಾಘವಾಚಾರ್ಯರು, ಎಲ್. ಗುಂಡಪ್ಪನವರು.

ಈಗ ನಡಸುತ್ತಿರುವವರು :

ಶ್ರೀ॥ ಅ. ನ. ಕೃಷ್ಣರಾಯರು

### ಕನ್ನಡ ನುಡಿ

ಹಿಂದೆ ನಡಸಿದವರು :

ಶ್ರೀ॥ ಅ. ನ. ಕೃಷ್ಣರಾಯರು, ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು.

ಈಗ ನಡಸುತ್ತಿರುವವರು :

ಶ್ರೀ॥ ಬಿ. ವೆಂಕೋಬರಾಯರು.

### ಕನ್ನಡ ಕನ್ನಡ ಕೋಶ

ಅಧ್ಯಕ್ಷರು : ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿಗಳು.

ಕಾರ್ಯದರ್ಶಿಗಳು : ಶ್ರೀ॥ ತೀ. ನಂ. ಶ್ರೀಕಂಠಯ್ಯನವರು.

### ಸಾಹಿತ್ಯ ಪರೀಕ್ಷಾ ಸಮಿತಿ

ಅಧ್ಯಕ್ಷರು : ಶ್ರೀ॥ ಎಂ. ಆರ್. ಶ್ರೀನಿವಾಸಮೂರ್ತಿಗಳು.

ಗ್ರಂಥಗಳನ್ನು ಬರೆದುಕೊಟ್ಟು ಸಹಾಯಮಾಡಿರುವವರು

ಶ್ರೀ॥ ವೈ. ಕೆ. ರಾಮಚಂದ್ರರಾಯರು, ದಿವಂಗತ ಶ್ರೀ॥ ನಂಗಪುರ ವೆಂಕಟೇಶ ಅಯ್ಯಂಗಾರರು, ಶ್ರೀ॥ ಸಾಲತೊರೆಯವರು, ಶ್ರೀ॥ ಡಾ. ನಂದೀಮಠ ಅವರು, ಶ್ರೀ॥ ಡಾ. ಎಂ. ಎಚ್. ಕೃಷ್ಣ ಅವರು

### ಪರಿಷತ್ತಿನ ಅಚ್ಚುಕೂಟದ ಮೇಲ್ವಿಚಾರಕರು

೧. ಶ್ರೀ॥ ಬಿ. ಪುಟ್ಟಯ್ಯನವರು, ಬಿ.ಎ. ೧೯೩೯–೪೪

೨. ,, ಬಿ. ರಾಮಾನುಜ ಅಯ್ಯಂಗಾರ್ ೧೯೪೫

### ಪರಿಷತ್ತಿನ ಸದಸ್ಯ ಬೆಳವಣಿಗೆ

| ವರ್ಗ | ೧೯೧೫ | ೧೯೨೭ | ೧೯೪೦ | ೧೯೪೫ |
|---|---|---|---|---|
| ೧. ಮಹಾ ಪೋಷಕರು .. | ೧ | ೧ | ೨ | ೧ |
| ೨. ಉದ್ಧಾರಕರು (೧,೦೦೦ ರೂ.) .. | | | ೧ | ೭ |
| ೩. ಪ್ರದಾತೃಗಳು (೫೦೦ ರೂ.) .. | | | | ೬ |
| ೪. ಆಶ್ರಯದಾತರು (೨೫೦ ರೂ.) .. | | | | ೨ |
| ೫. ಸಹಾಯಕರು (೧೦೦ ರೂ.) .. | | ೫ | ೧೪ | ೨೬೮ |
| ೬. ಆಜೀವ ಸದಸ್ಯರು (೫೦ ರೂ.) .. | ೪೦ | ೭೯ | ೧೭೯ | ೨೧೨ |
| ೭. ವಾರ್ಷಿಕ ಸದಸ್ಯರು : | | | | |
| ಪತ್ರಿಕೆ ಸಹಿತ .. | ೪೨ | ೬೩ | ೧೨೦ | ೫೨೩ |
| ಪತ್ರಿಕೆ ವಿನಾ .. | ೩೧ | | ೩೧೭ | ೧,೩೬೭ |
| | ೧೧೪ | ೧೪೮ | ೬೩೩ | ೨,೩೮೬ |

ಮಾಸ್ತಿ ವೆಂಕಟೇಶ ಅಯ್ಯಂಗಾರ್

# ಕರ್ನಾಟಕ ಮಿತ್ರಮಂಡಳಿ

## (ಹನ್ನೆರಡು ವರ್ಷಗಳಕಾಲ ಮದರಾಸಿನಲ್ಲಿ ಕನ್ನಡತಾಯ ನಂದಾದೀಪದ ರಕ್ಷಣೆ)

ಕನ್ನಡ ಸಾಹಿತ್ಯ ಪರಿಷತ್ತಿನ ಬಾವುಟವು ಸದ್ಯದಲ್ಲಿಯೇ ಮದರಾಸಿನಲ್ಲಿಯೂ ಹಾರಲಿರುವುದು. ತಾಯಿಯನ್ನು ಬಿಟ್ಟು ಜೀವನೋಪಾಯವನ್ನು ಹುಡುಕುತ್ತ ಪರವೂರಿಗೆ ಹೋಗಿರುವ ಕಂದನ ಮನೆಗೆ ಹೆತ್ತ ತಾಯಿಯೇ ಆಕಸ್ಮಿಕವಾಗಿ ಬರುವಂತೆ, ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನವು ನಮ್ಮ ಮದರಾಸಿನ ಕರ್ನಾಟಕ ಮಿತ್ರಮಂಡಳಿಯ ಆತಿಥ್ಯವನ್ನೊಪ್ಪಿಕೊಂಡು ಮದರಾಸಿನಲ್ಲೇ ನಡೆಯಲಿರುವುದು. ಸಮ್ಮೇಲನವು ಸಮಿಪಿಸುತ್ತಿರಲು ಕರ್ನಾಟಕ ಮಿತ್ರಮಂಡಳಿಗೀಗ ಹಬ್ಬದ ದಿನಗಳೇ ಪ್ರಾಪ್ತವಾಗಿವೆ ಎಂದೆನ್ನಬೇಕು. ಮಿಂತ್ರಮಂಡಳಿಯು ಹನ್ನೆರಡು ವರ್ಷಗಳ ತನ್ನ ಕಾರ್ಯಕಲಾಪಗಳನ್ನೆಲ್ಲಾ ಹಿಂದಿರುಗಿ ನೋಡುತ್ತ ಸಂತೋಷಪಡಬೇಕಾದ ದಿನಗಳಿವು. ಹೊಟ್ಟೆಪಾಡಿಗಾಗಿಯೋ ವಿದ್ಯಾರ್ಜನೆಗಾಗಿಯೋ ಕನ್ನಡತಾಯನ್ನು ಬಿಟ್ಟು ಬಹುದೂರ ಬಂದು ತಮಿಳುನಾಡಿನಲ್ಲಿ ನೆಲಸಿಕೊಂಡು, ಹೊಟ್ಟೆಯನ್ನು ತುಂಬಿಸುವ, ಇಲ್ಲವೆ ಇಂಗ್ಲೀಷು, 'ಸಯನ್ಸು'ಗಳನ್ನು ಕಲಿಯುವ, ಗೊಂದಲದ ಮಧ್ಯದಲ್ಲಿಯೂ ಕನ್ನಡ ಸಂಘವೊಂದನ್ನು ಮಾಡಿಕೊಂಡು, ಮಾಸಕ್ಕೊಮ್ಮೆಯೋ ಎರಡಾವೃತ್ತಿಯೋ ಕನ್ನಡತಾಯಲ್ಲಿರುವ ಅಕ್ಕರೆಯಿಂದಾದರೂ ಕೂಡಿಕೊಂಡು, ತಾಯ ನಂದಾದೀಪವನ್ನು ಉರಿಸುತ್ತ, ಎಂದಿಗೂ ಆಕೆಯ ದಿವ್ಯ ಜ್ಯೋತಿಯನ್ನು ಕಾಯುತ್ತಿದ್ದೇವಲ್ಲಾ ಎಂದು ನಾವು ಅಭಿಮಾನದಿಂದಲೂ ಆನಂದದಿಂದಲೂ ಹಿಗ್ಗಿ ನಲಿಯಬೇಕಾದ ದಿನಗಳಿವು.

ಮದರಾಸಿನಲ್ಲಿ ಮೊತ್ತಮೊದಲು ಕನ್ನಡದ ಬಾವುಟವನ್ನು ಮೇಲೇರಿಸಲು ಸಾಹಸಪಟ್ಟುದು ಕರ್ನಾಟಕ ಮಿತ್ರಮಂಡಳಿಯಲ್ಲ. ಮಿತ್ರಮಂಡಳಿಯು ರಂಗಭೂಮಿಯನ್ನು ಪ್ರವೇಶಿಸುವ ಮೊದಲೇ ಮದರಾಸಿನಲ್ಲಿ ಕನ್ನಡ ಧ್ವಜವನ್ನು ಮೇಲೇರಿಸುವ ಕೆಲವು ಪ್ರಯತ್ನಗಳಾಗಿದ್ದುವು. ಆದರೆ ಒಮ್ಮೆ ಮೇಲೇರಿದ ಪತಾಕೆಯು ಅಲ್ಪ ಕಾಲದಲ್ಲಿಯೇ ಕೀಳ್ಮೊಗವಾಗಿ ಜೋಲುಬೀಳುವುದೇ ಕ್ರಮವಾಗಿತ್ತು. ಒಮ್ಮೆ ಎತ್ತಿಹಿಡಿದ ಬಾವುಟವನ್ನು ಹಿಂತೆಗೆಯಲಾಗದೆಂದು ಹಠತೊಟ್ಟು ಹನ್ನೆರಡು ವರ್ಷಗಳಿಂದ ಕನ್ನಡ ಕಸ್ತೂರಿಯನ್ನು ಮದರಾಸಿನಲ್ಲಿ ಗಮಗಮಿಸಿರುವ ಏಕಮಾತ್ರ ಸಂಘವು ಕರ್ನಾಟಕ ಮಿತ್ರಮಂಡಳಿ. ಮಿತ್ರಮಂಡಳಿಯು ಸ್ಥಾಪಿತವಾದ್ದು ೧೯೩೩ರಲ್ಲಿ. ಅದಕ್ಕೂ ಸಾಧಾರಣ ಹದಿನೈದು ವರ್ಷಗಳ ಮುಂಚೆ 'ಕರ್ನಾಟಕ ಸಭೆ' ಎಂಬ ಸಂಘವು ಕೆಲವುಕಾಲ ಮದರಾಸಿನಲ್ಲಿ ಬಾಳಿ ಅಳಿದುಹೋಗಿತ್ತು. ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಸ್ವಾಗತಾಧ್ಯಕ್ಷರಾಗಿ ದೊರೆತಿರುವ ಡಾ॥ ಯು. ರಾಮರಾಯರೇ ಈ ಸಭೆಯ ಅಧ್ಯಕ್ಷರಾಗಿದ್ದರು. ಸಭೆಯನ್ನು ಸ್ಥಾಪಿಸುವುದಕ್ಕೆಂದು ಮದರಾಸಿನ ಕೆಲವು ಕನ್ನಡಿಗರು ಡಾ॥ ರಾಮರಾಯರ ಮನೆಯಲ್ಲಿಯೇ ಸಭೆ ಸೇರಿದ್ದರು. ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಉದ್ಘಾಟಕರಾಗಿರುವ ಶ್ರೀ॥ ಸಿ. ರಾಜಗೋಪಾಲಾಚಾರ್ಯರೂ ಆ ದಿನ ಸಭೆಯಲ್ಲಿದ್ದು ಕನ್ನಡಿಗರಿಗೆ ಪ್ರೋತ್ಸಾಹವನ್ನಿತ್ತುದು ಡಾ॥ ರಾಮರಾಯರ ನೆನಪಿನಲ್ಲಿದೆ. ಒಂದು ವರ್ಷ ಮೈಸೂರಿನ ಶ್ರೀಮನ್ ಮಹಾರಾಜರ ಆಸ್ಥಾನದ ನಾಟಕಮಂಡಳಿಯು ಗೌರವಾರ್ಥವಾಗಿ ಸತ್ಕಾರಕೂಟವನ್ನೇರ್ಪಡಿಸಿದ್ದೂ ಕೆಲವರಿಗೆ ತಿಳಿದಿದೆ. ವರ್ಷಕ್ಕೊಮ್ಮೆಯೋ ಎರಡು ಬಾರಿಯೋ ಕೆಲವು ಕನ್ನಡಿಗರು ಒಂದೆಡೆ ಸಭೆ ಸೇರಿ ಉಪಾಹಾರವನ್ನು ಸೇವಿಸಿ, ತುಸಕಾಲ ಹರಟೆಹೊಡೆದು ಆಮೇಲೆ ತಮ್ಮ ತಮ್ಮ ವಸತಿ, ವೃತ್ತಿಗಳಿಗೆ ತೆರಳುವುದೇ ರೂಢಿಯಾಗಿತ್ತು. ಆ ಸಂಘವನ್ನು ಕನ್ನಡಸಂಘ ಎಂದೆನ್ನುವುದಕ್ಕಿಂತ "ಕನ್ನಡ ಕ್ಲಬ್" ಎಂದು ಹೇಳಬಹುದಾಗಿತ್ತು. ಆ ಸಂಘವು ಶೈಶವದಲ್ಲಿಯೇ ನಾಮಶೇಷವಾಯಿತು. ಶೈಶವದಲ್ಲಿಯೇ ಅಳಿದುಹೋದ ಕನ್ನಡ ಸಂಘಗಳು ಇನ್ನೂ ಕೆಲವು ಇದ್ದವು. ಮದರಾಸಿನ "ಸುಗುಣ ವಿಲಾಸ ಸಭೆ" ಯಲ್ಲಿಯೂ ದಿವಂಗತ ಶ್ರೀ॥ ಬೆನಗಲ್ ರಾಮರಾಯರ ಪ್ರಯತ್ನಗಳಿಂದ ಕನ್ನಡದ ಶಾಖೆ ಒಂದಿತ್ತು. ಆದರೆ ನಾಟಕಗಳಲ್ಲದೆ ಬೇರೆ ಕಾರ್ಯಕಲಾಪಗಳಿಗೆ ಈ ಸಭೆಯಲ್ಲಿ ಅವಕಾಶವು ದೊರಕುತ್ತಿರಲಿಲ್ಲ. ಹಾಗಾಗಿ ಸುಗುಣ ವಿಲಾಸ ಸಭೆಯಲ್ಲಿದ್ದ ಕನ್ನಡಿಗರೆಲ್ಲಾ ಆ ಸಭೆಯಿಂದ ಹೊರಬಿದ್ದರು.



ಶ್ರೀ ಕೃಷ್ಣರಾಜ ಪರಿಷನ್ಮಂದಿರ
(ಕನ್ನಡ ಸಾಹಿತ್ಯ ಪರಿಷತ್ತಿನ ಕಟ್ಟಡ)



೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನದ
ಉದ್ಘಾಟಕರಾದ
ಡಾ॥ ಚಕ್ರವರ್ತಿ ರಾಜಗೋಪಾಲಾ
ಚಾರ್ಯರವರು



ಪರಿಷತ್ತಿನ ಉಪಾಧ್ಯಕ್ಷರಾದ
ರಾಜಸೇವಾಪ್ರಸಕ್ತ
ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರವರು

ಇವರಲ್ಲಿ—ಈಗ ಬಳ್ಳಾರಿಯಲ್ಲಿರುವ ಡಾ॥ ಯು. ಕೆ. ಎಲ್. ನಾರಾಯಣರಾಯರು, ಈಗ ಮಿತ್ರಮಂಡಳಿಯ ಕಾರ್ಯದರ್ಶಿಗಳಾಗಿರುವ ಶ್ರೀ ಕೆ. ವಿಟ್ಠಲರಾಯರು ಮತ್ತು ಈಗ ದಿವಂಗತರಾಗಿರುವ ಕ್ಯಾಪ್ಟನ್ [ಡಾ॥] ಎಂ. ಸಂಜೀವರಾಯರು, ಈ ಉತ್ಸಾಹೀ ತ್ರಿಮೂರ್ತಿಗಳು ಬೇರೊಂದು ಕನ್ನಡ ಸಂಘವನ್ನು ಸ್ಥಾಪಿಸುವ ಸಾಹಸಕ್ಕೆ ತೊಡಗಿದರು. ಈಗ ಮಿತ್ರಮಂಡಳಿಯ ಕಾರ್ಯಾಲಯ ವಿರುವ ಕರ್ನಾಟಕ ಬ್ಯಾಂಕಿನ ಕಟ್ಟಡದಲ್ಲಿಯೇ ಇವರು ಮಿತ್ರಮಂಡಳಿಯನ್ನು ಸ್ಥಾಪಿಸುವುದೆಂದು ಸಂಕಲ್ಪಿಸಿದ್ದು, ತಾವು ಸ್ಥಾಪಿಸಲಿದ್ದ ಸಂಘಕ್ಕೆ ಯಾವ ಹೆಸರನ್ನು ಇಡಬೇಕೆಂಬುದಾಗಿ ದೀರ್ಘಕಾಲ ಇವರೊಳಗೆ ಚರ್ಚೆಯೂ ನಡೆಯಿತು. ಒಮ್ಮೆ ಅಳಿದುಹೋದ ಕರ್ನಾಟಕ ಸಭೆಯ ಹೆಸರನ್ನೇ ಎತ್ತಿಕೊಳ್ಳುವುದು ಅವರು ಯಾರಿಗೂ ಮನಸ್ಸಿರಲಿಲ್ಲವಾಗಿ, 'ಕರ್ನಾಟಕ ಮಿತ್ರ ಮಂಡಳಿ' ಎಂಬ ಹೆಸರನ್ನಿಡುವುದೆಂದು ನಿಶ್ಚಯಿಸಿದರು.

ಜ್ಞಾನವೃದ್ಧವಯೋವೃದ್ಧರಾದ ಡಾ॥ ಯು. ರಾಮರಾಯರನ್ನೇ ಅಧ್ಯಕ್ಷರಾಗಿರೆಂದು ಬೇಡಿಕೊಂಡದ್ದಾಯಿತು. ತಾವು ಅಧ್ಯಕ್ಷರಾಗಿದ್ದ ಕೆಲವು ಕನ್ನಡ ಸಂಘಗಳು ಆ ಮೊದಲೇ ಅಳಿದ ಕಥೆಯನ್ನು ಹೇಳಿ, ಮಿತ್ರಮಂಡಳಿಯ ಸ್ಥಾಪನೆಗೆ, ತಮ್ಮ ವಿರೋಧವಿಲ್ಲದಿದ್ದರೂ, ಮದರಾಸಿನಲ್ಲಿ ಕನ್ನಡ ಸಂಘಗಳನ್ನು ಮಾಡಿಕೊಂಡು ಸಾಂಗವಾಗಿ ಸಂಘಗಳನ್ನು ನಡಸಿಕೊಳ್ಳುವುದು ಸುಲಭವಲ್ಲವೆಂದು ರಾಮರಾಯರು ಎಚ್ಚರಿಸಿದರು. 'ಕರ್ನಾಟಕ ಸಭೆ' ಯಂತೆ ಬರಿಯ ತಿಂಡಿತೀರ್ಥಗಳ ಸೇವನೆಯಿಂದಲೇ ತೃಪ್ತವಾಗಿರದೆ, ಆಗಾಗ ನಾಟಕಗಳನ್ನಭಿನಯಿಸಿ, ನೃತ್ಯಗೀತಗಳನ್ನೊದಗಿಸಿ, ಪುಸ್ತಕ ಭಂಡಾರವೊಂದನ್ನು ಸ್ಥಾಪಿಸಿ, ಸದಸ್ಯರನ್ನು ತೃಪ್ತಿಗೊಳಿಸುವುದರಿಂದ ಮಿತ್ರಮಂಡಳಿಯು ಬಹುಕಾಲ ಬಾಳುವುದು ಸಾಧ್ಯವಿದೆಯೆಂದು ಡಾ॥ ಯು. ಕೆ. ಎಲ್. ನಾರಾಯಣರಾಯರೂ ಅವರ ಸಂಗಾತಿಗಳೂ ನಿಶ್ಚಯವಾಣಿಯಿಂದ ನುಡಿದರು. ರಾಮರಾಯರು ಕೆಲವು ಕನ್ನಡ ಸಂಘಗಳ ಅವಸಾನವನ್ನು ಆ ಮೊದಲೇ ಅರಿತಿದ್ದ ತಮ್ಮಂಥ ದುರದೃಷ್ಟಶಾಲಿಗಳೇ ಮಿತ್ರಮಂಡಳಿಯ ಅಧ್ಯಕ್ಷರಾಗಬೇಕೆಂದು ಬಯಸುವುದು ಸರಿಯಲ್ಲವೆಂದು ಆರಂಭದಲ್ಲಿ ವಾದಿಸಿದರೂ, ಕೊನೆಗೆ ಕಿರಿಯರ ಬಯಕೆಯನ್ನು ಮನ್ನಿಸದಿರಲಿಲ್ಲ. ಅಂದಿನಿಂದ ಇಂದಿನವರೆಗೂ ರಾಮರಾಯರೇ ನಮ್ಮ ಅಧ್ಯಕ್ಷರಾಗಿದ್ದಾರೆ. ಅವರ ಪ್ರೋತ್ಸಾಹ, ಆಶೀರ್ವಾದಗಳ ದೆಸೆಯಿಂದ ಮಿತ್ರಮಂಡಳಿಯೂ ದಿನೇ ದಿನೇ ಪ್ರಬಲವಾಗುತ್ತ ಬೆಳೆದಿದೆ. ಅವರು ದುರದೃಷ್ಟಶಾಲಿಗಳಲ್ಲವೆಂಬುದು ಈಗ ವ್ಯಕ್ತವಾದಂತಾಗಿದೆ. ಎಂಟು ವರ್ಷ ವಯಸ್ಸಾಗುವವರೆಗೂ ಮಿತ್ರಮಂಡಳಿಯ ಸಭೆಗಳೆಲ್ಲಾ ರಾಮರಾಯರ "ಗಾನ ಮಂದಿರ" ಎಂಬ ಕಟ್ಟಡದಲ್ಲಿಯೇ ಕೂಡುತ್ತಿದ್ದುವು.

ರಾಮರಾಯರ ಬೆಂಬಲದ ಭರವಸೆಯು ದೊರೆತ ಮೇಲೆ ಕ್ರಿ. ಶ. ೧೯೩೩ನೆಯ ವರ್ಷ ಜುಲೈ ೧೭ನೆಯ ದಿನ ಮದರಾಸಿನ ಕನ್ನಡಿಗರೆಲ್ಲಾ ಮಿತ್ರಮಂಡಳಿಯನ್ನು ಸ್ಥಾಪಿಸುವುದಕ್ಕೆಂದು 'ಗಾನ ಮಂದಿರ'ದಲ್ಲಿ ನೆರೆದು, ಡಾ॥ ಯು. ರಾಮರಾಯರನ್ನು ಅಧ್ಯಕ್ಷರನ್ನಾಗಿಯೂ, ದಕ್ಷಿಣ ಕನ್ನಡ ಜಿಲ್ಲೆಯವರಾದ ಡಾ॥ ಪಾಂಗಾಳ ಶ್ರೀನಿವಾಸ ರಾಯರನ್ನೂ ಮೈಸೂರಿನವರಾದ ಮದರಾಸಿನ ನಿವೃತ್ತ ಅಕೌಂಟೆಂಟ್ ಜೆನೆರಲ್ ದಿವಾನ್ ಬಹದ್ದೂರ್ ಎಚ್. ಭೀಮಸೇನರಾಯರನ್ನೂ ಉಪಾಧ್ಯಕ್ಷರುಗಳನ್ನಾಗಿಯೂ, ಶ್ರೀ॥ ಎಂ. ಎನ್. ಚೌಡಪ್ಪನವರನ್ನೂ ಈಗ ಮೃತಪಟ್ಟಿರುವ ಡಾ॥ ಎಂ. ಸಂಜೀವರಾಯರನ್ನೂ ಕಾರ್ಯದರ್ಶಿಗಳನ್ನಾಗಿಯೂ ಆರಿಸಿಕೊಂಡರು. ಶ್ರೀ॥ ಕೆ. ವಿಟ್ಠಲರಾಯರು, ಡಾ॥ ಯು. ಕೆ. ಎಲ್. ನಾರಾಯಣರಾಯರು, ಶ್ರೀ॥ ಕೆ. ಎಸ್. ಕಾರಂತರು ಇವರೇ ಆದಿಯಾಗಿ ಬೇರೆ ಹತ್ತು ಕನ್ನಡಿಗರೂ ಕಾರ್ಯನಿರ್ವಾಹಕ ಸಮಿತಿಗೆ ಆರಿಸಲ್ಪಟ್ಟರು. ೧೯೩೪ರಲ್ಲಿ ಮಿತ್ರಮಂಡಳಿಯು ಕಂಪೆನೀಸ್ ಆಕ್ಟಿನ ಪ್ರಕಾರ ತನ್ನನ್ನು "ರಿಜಿಸ್ಟರ್" ಮಾಡಿಕೊಂಡಮೇಲೆ ಕೀರ್ತಿಶೇಷವಾದ "ಕರ್ನಾಟಕ ಸಭೆ"ಯ ಕಾರ್ಯನಿರ್ವಾಹಕ ಸಮಿತಿಯು ತನ್ನ ಕೈಯಲ್ಲಿದ್ದ ೬೪೯ ರೂಪಾಯಿಗಳನ್ನು ಮಿತ್ರಮಂಡಳಿಗೆ ಕೊಟ್ಟುದು ಮಿತ್ರಮಂಡಳಿಯ ಬಾಳಿನಲ್ಲಿ ವಿಶೇಷವಾದ ಘಟನೆ.

ಮಿತ್ರಮಂಡಳಿಯನ್ನು ಸ್ಥಾಪಿಸಿದವರು ದಕ್ಷಿಣ ಜಿಲ್ಲೆಯವರಾದ್ದರಿಂದ ಅವರು ತಮಗೆ ಪರಿಚಿತರಾದ ಕನ್ನಡಿಗರನ್ನೇ ಅಂದರೆ ಹೆಚ್ಚಾಗಿ ತಮ್ಮ ಜಿಲ್ಲೆಯವರನ್ನೇ ಮಿತ್ರಮಂಡಳಿಯ ಸದಸ್ಯರಾಗಬೇಕೆಂದು ಕೇಳಿಕೊಳ್ಳುವುದು ಸುಲಭವಾಯಿತು. ಇತರ ಕನ್ನಡಿಗರಿಗೆ ಮಿತ್ರಮಂಡಳಿಯಲ್ಲಿ ಸ್ಥಳವಿಲ್ಲವೆಂಬ ನಿರ್ಬಂಧವಿರಲಿಲ್ಲ. ಮಿತ್ರ

ಮಂಡಳಿಯ ನಿಬಂಧನೆಗಳಲ್ಲಿ ಎಲ್ಲೆಲ್ಲೂ ಕನ್ನಡಿಗರು, ಕನ್ನಡ ನುಡಿ, ಕನ್ನಡ ನಾಡು ಎಂಬೀ ಶಬ್ದಗಳನ್ನು ಕಾಣಬಹುದಲ್ಲದೆ ಎಲ್ಲಿಯೂ 'ದಕ್ಷಿಣ ಕನ್ನಡ' ಎಂಬ ಶಬ್ದ ಇಲ್ಲ. ಆರಂಭದಲ್ಲಿಯೇ ಮೈಸೂರಿನವರನ್ನೂ ಉಪಾಧ್ಯಕ್ಷರನ್ನಾಗಿ ಆರಿಸಿಕೊಂಡುದರ ಮರ್ಮವೂ ಇದೇ. ಈಗ ಮಿತ್ರಮಂಡಳಿಯ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರಾದ ಶ್ರೀ॥ ಕೆ. ಸುಬ್ಬರಾವ್ (ಇಂಜಿನೀಯರ್), ಡಾ॥ ಡಿ. ಹರಿರಾಯರು ಮತ್ತು ಶ್ರೀ॥ ಪಿ. ಎನ್. ವೆಂಕಟರಾಯರು ಮೈಸೂರಿನರು. ೨೧ನೆಯ ಕನ್ನಡ ಸಮ್ಮೇಲನದ ಸ್ವಾಗತ ಸಮಿತಿಯ ಉಪಾಧ್ಯಕ್ಷರಾದ ಶ್ರೀ॥ ಬಿ. ಜೂಗಪ್ಪನವರು ಮಿತ್ರಮಂಡಳಿಯ ಕಾರ್ಯಕಾರಿ ಸಮಿತಿಯ ಸದಸ್ಯರೂ ಹೌದು. ಇವರು ಬಳ್ಳಾರಿಯವರು. ಶ್ರೀ॥ ಎಚ್. ರಾಘವೇಂದ್ರರಾಯರೂ ಬಳ್ಳಾರಿಯವರು. ಇವರೂ ಮಿತ್ರಮಂಡಳಿಯ ಕಾರ್ಯಕಾರಿ ಮಂಡಲದ ಸದಸ್ಯರು. ಮೈಸೂರಿನವರೂ ಬಳ್ಳಾರಿಯತ್ತಕಡೆಯವರೂ ಮದರಾಸಿನಲ್ಲಿ ಅನೇಕರಿದ್ದಾರೆ. ಅವರಲ್ಲಿ ಬಹುಮಂದಿ ಮಿತ್ರಮಂಡಳಿಯನ್ನು ಬೇಗನೆ ಸೇರುವರೆಂದು ಮಿತ್ರಮಂಡಳಿ ನಿರೀಕ್ಷಿಸುತ್ತಿದೆ.

೧. ಮದರಾಸಿನಲ್ಲಿರುವ ಕನ್ನಡಿಗರ ಏಕೀಕರಣಕ್ಕಾಗಿ ದುಡಿಯುವುದು, ೨. ಮಂಡಳಿಯ ಸದಸ್ಯರಲ್ಲಿ ಸಾಹಿತಿಗಳಿದ್ದರೆ, ಬೇರೆ ಕಲಾವಿದರಿದ್ದರೆ, ಅವರ ಪ್ರತಿಭೆಯನ್ನು ವ್ಯಕ್ತಪಡಿಸಲು ಅವರಿಗೆ ಅವಕಾಶಕೊಟ್ಟು, ಅವರನ್ನು ಯೋಗ್ಯರೀತಿಯಲ್ಲಿ ಸನ್ಮಾನಿಸಿ ಅವರ ಪ್ರತಿಭೆಯನ್ನು ವೃದ್ಧಿಗೊಳಿಸಲು ಪ್ರಯತ್ನಿಸುವುದು, ೩. ಆಗಾಗ ನಾಟಕಗಳನ್ನಭಿನಯಿಸುವುದು, ಸಂಗೀತ, ನೃತ್ಯ, ಹರಿಕಥೆ, ವಾಚನ, ಭಾಷಣ ಇತ್ಯಾದಿಗಳನ್ನೊದಗಿಸುವುದು, ೪. ಕನ್ನಡ ಪುಸ್ತಕಭಂಡಾರವೊಂದನ್ನು ಸ್ಥಾಪಿಸುವುದು, ೫. ಕನ್ನಡನಾಡಿನ ಪ್ರಸಿದ್ಧ ಕಲಾವಿದರ, ಸಾಹಿತಿಗಳ ಮತ್ತು ಚಾರಿತ್ರಿಕ ಪುರುಷರ ಸ್ಮಾರಕೋತ್ಸವಗಳನ್ನಾಚರಿಸುವುದು, ೬. ಕಾಲಕ್ರಮೇಣ ಮದರಾಸಿನಲ್ಲಿ ಕನ್ನಡ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳನ್ನು ಸ್ಥಾಪಿಸುವುದು, ೭. ವಿದ್ಯಾರ್ಜನೆಗೆಂದು—ಮುಖ್ಯವಾಗಿ ಕನ್ನಡ ಮತ್ತಿತರ ಭಾರತೀಯ ಭಾಷೆಗಳನ್ನು ಕಲಿಯುವುದಕ್ಕೆಂದು—ಮದರಾಸಿಗೆ ಬರುವ ಬಡ ಕನ್ನಡಿಗರಿಗೆ ಧನ ಸಹಾಯವನ್ನು ಮಾಡುವುದು—ಇವು ಮಿತ್ರಮಂಡಳಿಯ ಮುಖ್ಯೋದ್ದೇಶಗಳು.

ಮಿತ್ರಮಂಡಳಿಯು ಸ್ಥಾಪಿತವಾದ ಕಾಲದಲ್ಲಿ ೨೭ ಸದಸ್ಯರಿದ್ದರು. ೧೯೪೧ ರವರೆಗೂ ಸದಸ್ಯರ ಸಂಖ್ಯೆಯು ೨೭೫ಕ್ಕೆ ಕಮ್ಮಿಯಾಗಿರಲಿಲ್ಲ. ಮಂಡಳಿಯ ಜನನವಾದ ಕೆಲವು ದಿನಗಳಲ್ಲೇ ಒಂದು ಸ್ವಾರಸ್ಯವಾದ ಪ್ರಸಂಗವೊದಗಿತು. ಮದರಾಸಿನಲ್ಲಿ ಮಿತ್ರಮಂಡಳಿಯ ಆಜೀವ ಸದಸ್ಯರಾಗುವವರು ಯಾರೂ ಇರಲಿಕ್ಕಿಲ್ಲವೆಂಬ ನಂಬುಗೆಯಿಂದ ಕಾರ್ಯನಿರ್ವಾಹಕ ಸಮಿತಿಯು ಆಜೀವ ಸದಸ್ಯರ ತರಗತಿಯೊಂದನ್ನು ಇಟ್ಟುಕೊಳ್ಳುವ ಸಾಹಸಕ್ಕೆ ತೊಡಗಲೇ ಇಲ್ಲ. ಒಂದು ದಿನ ಆ ಕಾಲದಲ್ಲಿ ಮದರಾಸು ಹೈಕೋರ್ಟಿನ ಜಡ್ಜರಾಗಿದ್ದ ಶ್ರೀ॥ ವಿ. ಪಾಂಡುರಂಗರಾಯರನ್ನು ಮಿತ್ರಮಂಡಳಿಯ ಸದಸ್ಯರಾಗಬೇಕೆಂದು ಕೇಳುವುದಕ್ಕೆಂದು ಕಾರ್ಯದರ್ಶಿಗಳು ರಾಯರ ಮನೆಗೆ ಹೋಗಿದ್ದರು. ರಾಯರು ತಾವು ಮಿತ್ರಮಂಡಳಿಯ ಸದಸ್ಯರಾಗಲು ಒಪ್ಪಿಕೊಂಡುದಲ್ಲದೆ, ಮಿತ್ರಮಂಡಳಿಯು ಆಜೀವ ಸದಸ್ಯರ ತರಗತಿಯೊಂದನ್ನು ಇಟ್ಟುಕೊಳ್ಳುವುದು ಅಗತ್ಯವೆಂದು ಸೂಚಿಸಿದರು. ಆಕ್ಷಣದಲ್ಲಿಯೇ ಗಂಡಸರು ನೂರು ರೂಪಾಯಿಗಳನ್ನೂ ಹೆಂಗಸರು ಐವತ್ತು ರೂಪಾಯಿಗಳನ್ನೂ ಕೊಟ್ಟಲ್ಲಿ ಆಜೀವ ಸದಸ್ಯರೆಂದೆನ್ನಿಸಿಕೊಳ್ಳಬಹುದೆಂದು ನಿರ್ಣಯಿಸಿ, ಶ್ರೀ॥ ವಿ. ಪಿ. ರಾಯರಿಂದಲೂ ಅವರ ಸಹಧರ್ಮಿಣಿಯವರಿಂದಲೂ ಒಟ್ಟಿನಲ್ಲಿ ನೂರೈವತ್ತು ರೂಪಾಯಿಗಳನ್ನು ಅಂದೇ ತೆಗೆದುಕೊಂಡು, ಕಾರ್ಯದರ್ಶಿಗಳು ಡಾ॥ ರಾಮರಾಯರಲ್ಲಿಗೂ ಶ್ರೀ॥ ಭೀಮಸೇನರಾಯರಲ್ಲಿಗೂ ಹೋಗಿ ಎರಡು ಕಡೆಗಳಲ್ಲಿಯೂ ದಂಪತಿಗಳನ್ನು ಆಜೀವ ಸದಸ್ಯರನ್ನಾಗಿ ಮಾಡಿಕೊಂಡರು. ಒಂದೇ ದಿನ ಮಿತ್ರಮಂಡಳಿಗೆ ಆರು ಆಜೀವ ಸದಸ್ಯರು ದೊರೆತಂತಾಯಿತು. ಈಗ ಆಜೀವ ಸದಸ್ಯರ ಸಂಖ್ಯೆ ೨೩. ಇದೆ. ಮದರಾಸು ಹೈಕೋರ್ಟಿನ ಜಡ್ಜರಾದ ಶ್ರೀ॥ ಕೆ. ಪಿ. ಲಕ್ಷ್ಮಣರಾಯರೂ, ಡಾ॥ ಯು. ಎಲ್. ನಾರಾಯಣರಾಯರು ಮತ್ತು ಅವರ ಸಹಧರ್ಮಿಣಿಯರೂ, ಡಾ॥ ಪಿ. ರಾಮರಾಯರು ಮತ್ತು ಅವರ ಸಹಧರ್ಮಿಣಿಯರೂ, ಶ್ರೀ॥ ಕೆ. ಸೀತಾರಾಮರಾಯರು ಮತ್ತು ಅವರ ಪತ್ನಿಯವರೂ, ರಾವ್‌ಬಹದ್ದೂರ್ ಎಂ. ಗಿರಿಯಪ್ಪನವರೂ, ಶ್ರೀ॥ ಕೆ.

ಕೃಷ್ಣರಾಯರೂ, ಡಾ॥ ಎಚ್. ಎಂ. ರಾಯರೂ, ಡಾ॥ ಕೆ. ವೆಂಕಟರಾಯರೂ, ಡಾ॥ ಎಂ. ಆರ್. ಬೈಲ್ ಮತ್ತು ಅವರ ಪತ್ನಿಯವರೂ, ಶ್ರೀ॥ ಕೆ. ವಿಟ್ಠಲರಾಯರೂ, ಶ್ರೀ॥ ಕೆ. ವಿ. ಕಾರಂತರೂ, ಚಲನಚಿತ್ರ ಪ್ರಖ್ಯಾತರಾದ ಶ್ರೀ॥ ವೈ. ವಿ. ರಾಯರೂ ಮತ್ತು ಶ್ರೀ॥ ಚಿತ್ತೂರು ನಾಗಯ್ಯನವರೂ ಮತ್ತು ಶ್ರೀ॥ ಎಲ್. ನರಸಿಂಗ ರಾಯರೂ ಈಗ ಮಿತ್ರಮಂಡಳಿಯ ಆಜೀವ ಸದಸ್ಯ ರಾಗಿದ್ದಾರೆ. ಇನ್ನೂ ಮದರಾಸಿನ ಹಲವು ಕನ್ನಡಿಗರು ಪತ್ನೀಸಮೇತರಾಗಿ ಮಿತ್ರಮಂಡಳಿಯ ಆಜೀವ ಸದಸ್ಯ ರಾದಾರೆಂಬ ನಿರೀಕ್ಷೆಯಿದೆ.

ಆರಂಭದಲ್ಲಿ ನಾಟಕಗಳೇ ಹೆಚ್ಚಿನವರನ್ನು ಆಕರ್ಷಿಸು ತ್ತಿದ್ದುವು. ವರ್ಷವೂ ನಾಲ್ಕೈದು ನಾಟಕಗಳನ್ನಭಿ ನಯಿಸುವುದು, ಹತ್ತೆಂಟು ಹರಿಕಥೆಗಳನ್ನೊ ವಾಚನ ಗಳನ್ನೊ ಏರ್ಪಡಿಸುವುದು, ನೃತ್ಯಗೀತಾದಿಗಳನ್ನೊದಗಿಸು ವುದು ಕ್ರಮವಾಗಿತ್ತು. ಹೆಚ್ಚಾಗಿ ಮಿತ್ರಮಂಡಳಿಯ ಸದಸ್ಯರುಗಳೇ ನಾಟಕಗಳಲ್ಲಿ ಭಾಗವಹಿಸುತ್ತಿದ್ದರು. ಒಮ್ಮೊಮ್ಮೆ ಮದರಾಸಿನ ಹೊರಗಿನ ನಾಟಕ ಮಂಡಳಿ ಗಳನ್ನು ಕರೆಯಿಸಿಕೊಂಡು, ಮಿತ್ರಮಂಡಳಿಯ ನೇತೃತ್ವ ದಲ್ಲಿ ನಾಟಕಗಳನ್ನು ಆಡಿಸುವುದೂ ಇತ್ತು. ಮಿತ್ರ ಮಂಡಳಿಯನ್ನು ಸ್ಥಾಪಿಸಿದ ವರ್ಷದಲ್ಲಿಯೇ ಗುಬ್ಬಿ ನಾಟಕ ಕಂಪೆನಿಯ ವಿನೋದರತ್ನಾಕರ ಜಿ. ಎಚ್. ವೀರಣ್ಣನವರು 'ರಾಜಭಕ್ತಿ' ಎಂಬ ನಾಟಕವನ್ನಭಿ ನಯಿಸಿ ತೋರಿಸಿ, ತಮಗೆ ದೊರೆತ ಹಣದಿಂದ ೨೫ ರೂಪಾಯಿಗಳನ್ನು ಮಿತ್ರಮಂಡಳಿಯ ಬಡವಿದ್ಯಾರ್ಥಿಗಳ ನಿಧಿಗೆ ಕೊಟ್ಟರು. ಮಿತ್ರಮಂಡಳಿಯೂ ಶ್ರೀ॥ ವೀರಣ್ಣ ನವರ ಗೌರವಾರ್ಥವಾಗಿ ಸತ್ಕಾರಕೂಟವೊಂದನ್ನೇರ್ಪ ಡಿಸಿ, ಅವರಿಗೆ ಬೆಳ್ಳಿಯ ಪಾತ್ರದಲ್ಲಿ ಮಾನಪತ್ರವನ್ನು ಆರ್ಪಿಸಿತು. ಮರುವರ್ಷವೇ ಶ್ರೀ॥ ಸಿ. ಬಿ. ಮಲ್ಲಪ್ಪನವರು 'ಗೋರ ಕುಂಬಾರ' ಎಂಬ ನಾಟಕವನ್ನಭಿನಯಿಸಿ, ಬಡ ವಿದ್ಯಾರ್ಥಿಗಳ ನಿಧಿಗೆಂದು ನೂರು ರೂಪಾಯಿಗಳನ್ನು ಕೊಟ್ಟದ್ದಿದೆ. ಮಿತ್ರಮಂಡಳಿಯು ಶ್ರೀ॥ ಮಲ್ಲಪ್ಪನವ ರನ್ನೂ ಮಾನಪತ್ರವನ್ನರ್ಪಿಸಿ ಗೌರವಿಸಿರುವುದು. ಒಂದು ವರ್ಷ ಮೈಸೂರಿನ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡ ಳಿಯು 'ಭೂಕೈಲಾಸ' ಎಂಬ ನಾಟಕವನ್ನು ಅಭಿನಯಿಸಿ ನೂರೈವತ್ತು ರೂಪಾಯಿಗಳನ್ನು ಬಡವಿದ್ಯಾರ್ಥಿಗಳ ನಿಧಿಗೆ ಕೊಟ್ಟುದಕ್ಕಾಗಿ, ನಾಟಕ ಮಂಡಳಿಯ ಮಾಲಿಕರಾದ ಶ್ರೀ॥ ಎಂ. ವಿ. ಸುಬ್ಬಯ್ಯನಾಯ್ಡು ಅವರಿಗೂ, ಶ್ರೀ॥ ಆರ್. ನಾಗೇಂದ್ರರಾವ್ ಅವರಿಗೂ ಮಿತ್ರಮಂಡಳಿಯು ಮಾನಪತ್ರಗಳನ್ನರ್ಪಿಸಿರುವುದು. ಅವರ ನಾಟಕ ಮಂಡಳಿಯ ನಟನಟಿಯರಿಗೆಲ್ಲಾ ಒಂದು ದಿನ ಸತ್ಕಾರ ಕೂಟವನ್ನೇರ್ಪಡಿಸಿ, ಅವರನ್ನೂ ಗೌರವಿಸಿದ್ದುಂಟು. ಕೆಲವು ಕಾಲದಮೇಲೆ ಇದೇ ನಾಟಕ ಮಂಡಳಿಯು 'ನಿರುಪಮಾ' ಮತ್ತು 'ವಿರಾಟಪರ್ವ' ಎಂಬ ನಾಟಕ ಗಳನ್ನು ಅಭಿನಯಿಸಿ ಮಿತ್ರಮಂಡಳಿಯ ಬಡವಿದ್ಯಾರ್ಥಿ ಗಳ ನಿಧಿಗೆ ಮತ್ತಷ್ಟು ಧನಸಹಾಯವನ್ನು ಮಾಡಿರು ವುದು. ಒಮ್ಮೆ ಮೈಸೂರಿನ ಕಲಾಸೇವಾ ಮಂಡಲಿಯು 'ಸಂಸಾರನೌಕ'ವೆಂಬ ನಾಟಕವನ್ನು ಮಿತ್ರಮಂಡಳಿಯ ಸಹಾಯಾರ್ಥವಾಗಿ ಅಭಿನಯಿಸಿರುವುದು. ಶ್ರೀ॥ ಜಿ. ಎಚ್. ವೀರಣ್ಣ, ಶ್ರೀ॥ ಎಂ. ವಿ. ಸುಬ್ಬಯ್ಯನಾಯ್ಡು, ಶ್ರೀ॥ ಆರ್. ನಾಗೇಂದ್ರರಾವ್, ಶ್ರೀ॥ ಸಿ. ಬಿ. ಮಲ್ಲಪ್ಪ, ಶ್ರೀ॥ ಕೆ. ಹಿರಣ್ಣಯ್ಯ— ಈ ಕಲಾವಿದರುಗಳಿಗೆ ಪೂಜ್ಯ ಸ್ಥಾನವನ್ನು ಮಿತ್ರಮಂಡಳಿ ಇಂದಿಗೂ ತನ್ನ ಹೃದಯ ದಲ್ಲಿ ಕಾದಿಟ್ಟುಕೊಂಡಿದೆ. ಇಂದಿಗೂ ಇವರೆಲ್ಲರೂ ಮಿತ್ರ ಮಂಡಳಿಯ ಗೌರವ ಸದಸ್ಯರಾಗಿದ್ದಾರೆ.

ಆದಿಯಿಂದಲೇ ಮಿತ್ರಮಂಡಳಿ ನಾಡಹಬ್ಬವನ್ನು ಆಚರಿಸುವ ಕಾರ್ಯಕ್ರಮವನ್ನು ಇಟ್ಟುಕೊಂಡಿದೆ. ಆರಂಭದಲ್ಲಿ ವಿಜಯ ದಶಮಿಯ ದಿನ ಮಾತ್ರವೇ ನಾಡ ಹಬ್ಬವನ್ನು ಆಚರಿಸುವುದಿತ್ತು. ಆ ದಿನ ಡಾ॥ ಯು. ರಾಮರಾಯರು 'ಗಾನಮಂದಿರ'ದಲ್ಲಿ ನೆರೆದ ಕನ್ನಡ ಬಂಧುಗಳಿಗೆ ಉಪಾಹಾರವನ್ನೊದಗಿಸುವುದೂ ಇತ್ತು. ಆ ಮೇಲೆ ನೃತ್ಯಗೀತಾದಿ ವಿನೋದಾವಳಿಗಳು ಆಗು ತ್ತಿದ್ದುವು. ಬರಬರುತ್ತ ಸದಸ್ಯರ ಉತ್ಸಾಹವು ಹೆಚ್ಚಿ ದಂತೆ ನಾಡಹಬ್ಬವನ್ನು ಐದಾರು ದಿನಗಳವರೆಗೂ ಆಚರಿಸುವುದು ಬಳಕೆಗೆ ಬಂತು. ಒಂದೊಂದು ದಿನ ಒಬ್ಬೊಬ್ಬ ಸದಸ್ಯರು ತಿಂಡಿತೀರ್ಥಗಳನ್ನೊದಗಿಸು ತ್ತಿದ್ದರು. ಈ ರೀತಿ ಡಾ॥ ಯು. ರಾಮರಾಯರು, ಶ್ರೀ॥ ಎಚ್. ಭೀಮಸೇನರಾಯರು, ಶ್ರೀ॥ ವಿ. ಪಿ. ರಾಯರು, ಶ್ರೀ॥ ಕೆ. ಸೀತಾರಾಮರಾಯರು, ಡಾ॥ ವೆಂಕಟಗಿರಿಗಳು, ಡಾ॥ ಕೇಶವ ಪೈಗಳು, ಡಾ॥ ಯು. ಎಲ್. ನಾರಾಯಣ ರಾಯರು, ಶ್ರೀ॥ ಎಂ. ಗಿರಿಯಪ್ಪನವರು ಮೊದಲಾದವರ ಆತಿಥ್ಯವನ್ನೊಪ್ಪಿಕೊಂಡು ಮಿತ್ರಮಂಡಳಿ ಹಲವು ದಸರಾ

ಮಹೋತ್ಸವಗಳ ಸವಿಯನ್ನುಂಡಿರುವುದು. ಇತ್ತೀಚೆಗೆ ನಟರ, ಹಾಡುಗಾರರ ಮತ್ತು ಗಮಕಿಗಳ ಅಭಾವದಿಂದ ನಾಡಹಬ್ಬವು ಸಂಕ್ಷಿಪ್ತವಾಗಲು ಆರಂಭಿಸಿತ್ತು. ಆದರೆ ಈ ವರ್ಷ ನಾಡಹಬ್ಬವು ಪುನಃ ವಿಜೃಂಭಣೆಯಿಂದ ನಡೆದುದು ಸಂತೋಷಕ್ಕೆ ಕಾರಣವಾಗಿದೆ. ಮೂರು ದಿನಗಳಲ್ಲಿ 'ಹಿರಣ್ಯಕಶಿಪು' ಮತ್ತು 'ಕನ್ಯಾರ್ಥಿ' ಎಂಬ ಎರಡು ನಾಟಕಗಳೂ, ಕೆಲವು ಬಾಲಿಕೆಯರಿಂದ ಬಲು ಸೊಗಸಾದ ನೃತ್ಯಗೀತಗಳೂ, ಮಿತ್ರಮಂಡಳಿಯ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರಾಗಿದ್ದ ಶ್ರೀ॥ ಬಿ. ಎನ್. ಶ್ರೀನಿವಾಸಯ್ಯನವರಿಂದ ಭಾರತ ವಾಚನವೂ ಆಗಿದ್ದುವು. ಹಲವೊಮ್ಮೆ ನಾಡಹಬ್ಬದ ಕೆಲವು ದಿನಗಳಲ್ಲಿ ಮಹಿಳೆಯರೂ ಮಕ್ಕಳೂ ಕೂಡಿಕೊಂಡು ತಮ್ಮದೇ ಕಾರ್ಯಕ್ರಮಗಳನ್ನು ಕೈಕೊಂಡು ನೃತ್ಯಗೀತಗಳನ್ನೊದಗಿಸಿದ್ದುಂಟು. ನಾಡಹಬ್ಬದ ಕಾಲದಲ್ಲಿ ಒಮ್ಮೊಮ್ಮೆ ವಿದ್ವಾನ್ ಸೀತಾರಾಮಾಚಾರ್ಯರು ಮೊದಲಾದವರು ಭಾಷಣಗಳನ್ನು ಕೊಟ್ಟುದೂ ಉಂಟು.

ಇಂದು ಪುಸ್ತಕಭಂಡಾರವು ಮಿತ್ರಮಂಡಳಿಯ ಒಂದು ಮುಖ್ಯ ಅಂಗವಾಗಿದೆ. ಆರಂಭದಲ್ಲಿ ಹೆಚ್ಚಿನ ಪುಸ್ತಕಗಳಿರಲಿಲ್ಲ. ಅವನ್ನು ಓದುವವರೂ ಇರಲಿಲ್ಲ. ಶ್ರೀ॥ ಎಚ್. ಭೀಮಸೇನರಾಯರೂ, ದಿವಂಗತ ಡಾ॥ ಯು. ವೆಂಕಟರಾಯರೂ, ರಾವ್‌ಸಾಹೇಬ್ ಬಿ. ಎನ್. ನಿರೋಡಿಯವರೂ, ಮಂಜೇಶ್ವರ ಸಂಜೀವರಾಯರೂ, ಶ್ರೀ॥ ಎ. ಕೆ. ಗೋಪಾಲರಾಯರೂ ಮಿತ್ರಮಂಡಳಿಗೆ ಹಲವು ಪುಸ್ತಕಗಳನ್ನು ಕೊಟ್ಟಿದ್ದಾರೆ. ಮಿತ್ರಮಂಡಳಿಯೂ ಆಗಾಗ ಪುಸ್ತಕಗಳನ್ನು ಕೊಂಡುಕೊಳ್ಳುತ್ತಲೇ ಇದ್ದಿದೆ. ಪುಸ್ತಕಗಳಿಗಾಗಿ ೧೯೩೮ರಲ್ಲಿ ೨೩೦ ಕರೆಗಳೂ, ೧೯೩೯ರಲ್ಲಿ ೪೩೮ ಕರೆಗಳೂ, ೧೯೪೧ರಲ್ಲಿ ೯೩೩ ಕರೆಗಳೂ ಆಗಿದ್ದವೆನ್ನುವಾಗ, ಕಾಲಕ್ರಮೇಣ ಮದರಾಸಿನ ಕನ್ನಡಿಗರಲ್ಲಾದ ಜನಜಾಗೃತಿ, ಕನ್ನಡ ಸಾಹಿತ್ಯದ ಸವಿಯನ್ನುಣ್ಣಬೇಕೆಂಬ ಅವರ ಬಯಕೆ—ಇವುಗಳ ಅರಿವು ಸುಲಭದಲ್ಲೇ ಆಗುವುದು. ಈಗ ಸಾಧಾರಣ ೩೫೦ ಸದಸ್ಯರಿರುತ್ತಾರೆ, ವರ್ಷವೊಂದರಲ್ಲಿ ಸುಮಾರು ೧,೫೦೦ಕ್ಕೂ ಮಿಕ್ಕಿಯೇ ಪುಸ್ತಕಗಳಿಗಾಗಿ ಕರೆಗಳಿವೆ.

ಕನ್ನಡನಾಡಿನ ಹೆಸರಾಂತ ಕಲಾವಿದರುಗಳ ಸಾಹಿತಿಗಳ ಮತ್ತು ಇತಿಹಾಸ ಪುರುಷರ ಸ್ಮಾರಕೋತ್ಸವಗಳನ್ನೂ ಮಿತ್ರಮಂಡಳಿಯು ಆಚರಿಸುತ್ತಿದೆ. ಪ್ರಾಯಶಃ ಪ್ರತಿವರ್ಷವೂ ಪುರಂದರದಾಸರ ದಿನಾಚರಣೆಯಾಗಿರುವುದು. ದಾಸರ ಜೀವನ ಕಥೆಯನ್ನು ತಿಳಿಯ ಹೇಳುವುದು, ಅವರ ಕೀರ್ತನೆಗಳನ್ನು ಹಾಡುವುದು ಇವೇ ಮೊದಲಾದ ಕಾರ್ಯಭಾಗಗಳಿಂದ ಪುರಂದರದಾಸರ ಸ್ಮಾರಕೋತ್ಸವವು ಸಾಗುತ್ತಿದೆ. ೧೯೪೧ರಲ್ಲಿ ಮೂರು ದಿನಗಳಕಾಲ ದಾಸರ ಸ್ಮಾರಕೋತ್ಸವವನ್ನು ಆಚರಿಸಿರುವುದು. ದಾಸರ ಕೀರ್ತನೆಗಳನ್ನು ಹಾಡುವುದರಲ್ಲಿಯೂ ಸ್ಪರ್ಧೆಯಿತ್ತು. ಅಂದು ದಕ್ಷಿಣ ಭಾರತದ ಶ್ರೇಷ್ಠ ಸಂಗೀತಜ್ಞರೂ ನೆರೆದಿದ್ದು ಪುರಂದರದಾಸರ ಭಾವಚಿತ್ರದ ಅನಾವರಣ ಪ್ರಸಂಗವನ್ನು ಚೆಂದಗಾಣಿಸಿದ್ದರು. ಒಂದು ವರ್ಷ ವರದಾಚಾರ್ಯರ ದಿನಾಚರಣೆಯೂ ಆಗಿತ್ತು. ಆ ಸಮಾರಂಭದಲ್ಲಿ, ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ಆಯ್ಕೆಯಾಗಿರುವ ಶ್ರೀ॥ ಟಿ. ಪಿ. ಕೈಲಾಸಂ ಅವರೇ ತಾನು ಕಂಡ ವರದಾಚಾರ್ಯರ ಅನುಕರಣೆಯನ್ನು ಸ್ವಲ್ಪಮಾಡಿ ತೋರಿಸಿದ್ದು ಇನ್ನೂ ನಮ್ಮಲ್ಲಿ ಹಲವರ ನೆನಪಿನಲ್ಲಿದೆ.

ಮಿತ್ರಮಂಡಳಿಗೆ ೯ ವರ್ಷ ವಯಸ್ಸಾಗಿರುವಾಗ ಒಂದು ಮಹದಾಪತ್ತು ಬಂದೊದಗಿ ಕೆಲವು ಕಾಲ ಮದರಾಸಿನಲ್ಲಿ ಕನ್ನಡತಾಯ ಪೂಜೆಯನ್ನು ಮಾಡುವವರಿಲ್ಲವಾಯಿತು. ೧೯೪೩ನೆಯ ಮಾರ್ಚ್ ತಿಂಗಳಲ್ಲಿ ಜಪಾನೀಯರು ಮದರಾಸಿಗೆ ದಾಳಿಯನ್ನಿಡಬಹುದೆಂಬ ಸಂದೇಹದಿಂದ ಮದರಾಸಿನ ಪುರಜನರೆಲ್ಲಾ ದಕ್ಷಿಣ ಭಾರತದ ಬೇರೆಬೇರೆ ಕಡೆಗಳಿಗೆ ಚೆದರಿದರು. ೧೯೪೪ನೆಯ ಫೆಬ್ರವರಿವರೆಗೂ ಮಿತ್ರಮಂಡಳಿಯು ಅಜ್ಞಾತವಾಸದಲ್ಲಿತ್ತು. ಆಮೇಲೆ ಮಿತ್ರಮಂಡಳಿಯು ಮತ್ತೆ ತಲೆಯೆತ್ತಿ ದ್ವಿಗುಣಿತ ಉತ್ಸಾಹದಿಂದ ತಾಯ ಪೂಜೆಗೆ ತೊಡಗಿತು. ೧೯೪೪ರಲ್ಲಿ ೧೮೩ ಸದಸ್ಯರಿದ್ದರು. ಓಡಿಹೋದ ಪೂರ್ವದ ಸದಸ್ಯರಲ್ಲಿ ಹಲವರು ಮದರಾಸಿಗೆ ಹಿಂದಿರುಗಲೇ ಇಲ್ಲ. ಹಿಂದಿರುಗಿದವರಲ್ಲಿಯೂ ಕೆಲವರು ಒಮ್ಮೆ ಬಿಟ್ಟುಹೋದ ಸದಸ್ಯತ್ವವನ್ನು ಮುಂದುವರಿಸಲಿಲ್ಲ. ಆದರೂ ಒಂದು ವರ್ಷದೊಳಗೇ ಮಿತ್ರಮಂಡಳಿಯ ಸದಸ್ಯರ ಸಂಖ್ಯೆಯು ೩೫೦ನ್ನು ಮುಟ್ಟಿರುವುದು.

ಉತ್ತಮ ನಟರಾಗಿದ್ದ ಡಾ॥ ಮಿತ್ರಂತಾಯರೂ, ಡಾ॥ ಪಿ. ವೆಂಕಟಾಚಾರ್ಯರೂ, ಡಾ॥ ಯು. ಕೆ. ಎಲ್.

# ಮುನ್ನಡೆ

## ಮೈಸೂರು ಇನ್‌ಷ್ಯೂರೆನ್ಸ್ ಕಂಪೆನಿ, ಲಿಮಿಟೆಡ್

ಇದು

ಪ್ರಧಾನ ಕಛೇರಿ "ಲಕ್ಷ್ಮೀಸ್ಥಾನಂ" ಬೆಂಗಳೂರು ನಗರ

(ಆಪಜ್ಜಲಧಿಗಿದು ಮಹಾಯಾನ ಪಾತ್ರಂ)

ಕಳೆದ 1944ನೇ ವರ್ಷದಲ್ಲಿ ನಾವು ಸಾಧಿಸಿರುವ ಹೊಸ ವಿಮಾ ಉದ್ಯಮವು 1944ನೇ ವರ್ಷದಲ್ಲಾದ ಉದ್ಯಮದ ಶೇಕಡಾ ೭೫ಕ್ಕಿಂತಲೂ ಅಧಿಕಗೊಂಡಿದೆಯೆಂದು ಪ್ರಕಟಿಸಲು ಸಂತೋಷಿಸುತ್ತೇವೆ.

ಹುಬ್ಬಳ್ಳಿ, ದಾವಣಗೆರೆ, ಗುಲ್ಬರ್ಗಾ, ವೆಲ್ಲೂರು, ಕೊಯಮತ್ತೂರು ಮುಂತಾದೆಡೆಗಳಲ್ಲಿ ನಮ್ಮ ಕಂಪೆನಿಯ ಆರ್ಗನೈಜೇಷನ್ ಆಫೀಸುಗಳು ಸುವ್ಯಸ್ಥಿತ ರೀತಿಯಿಂದ ಕೆಲಸಮಾಡುತ್ತಿವೆ.

ಈಚೆಗೆ ಬೊಂಬಾಯಿ, ಶೋಲಾಪುರ, ಅನಂತಪುರ, ಬಳ್ಳಾರಿ, ಕಡಪ, ದಕ್ಷಿಣ ಕನ್ನಡ ಜಿಲ್ಲಾ, ಮದರಾಸು, ಮಧುರ, ಪುದುಕೋಟೆ, ಕೊಲಂಬೋ (ಸಿಲೋನ್) ಮುಂತಾದ ಹಲವೆಡೆಗಳಲ್ಲಿ ನಮ್ಮ ಕಂಪೆನಿಯ ಕಾರ್ಯಕ್ಷೇತ್ರವು ವಿಸ್ತಾರಗೊಂಡಿದೆ.

ಪ್ರತಿನಿಧಿಗಳಿಲ್ಲದಿರುವೆಡೆಗಳಲ್ಲಿ ಧಾರಾಳವಾದ ಕಮಿಷನ್ ಅಥವಾ ಮಾಸಿಕ ಅಲೋಯನ್ಸು ಪ್ರತಿಫಲದ ಮೇಲೆ ಸ್ಪೆಷಲ್ ಏಜಂಟರು, ಚೀಫ್ ಏಜಂಟರು ಮತ್ತು ಆರ್ಗನೈಜರುಗಳಾಗಿ ಕೆಲಸ ಮಾಡಬಯಸುವವರು ಈ ಮುಂದೆ ಕಂಡ ವಿಳಾಸಕ್ಕೆ ಬರೆಯುವುದು.

ಜೆ. ವಿ. ದೊಡ್ಡವೀರಪ್ಪ
ಜನರಲ್ ಮ್ಯಾನೇಜರು
ಮೈಸೂರು ಇನ್‌ಷೂರೆನ್ಸ್ ಕಂಪೆನಿ, ಲಿಮಿಟೆಡ್
"ಲಕ್ಷ್ಮೀಸ್ಥಾನಂ"
ಲಾಲ್‌ಬಾಗ್-ಕೋಟೆ ರಸ್ತೆ, ಬೆಂಗಳೂರು ಸಿಟಿ

ನಾರಾಯಣರಾಯರೂ ಇನ್ನೂ ಮದರಾಸಿಗೆ ಹಿಂದಿರುಗ ದಿರುವುದರಿಂದ ನಾಟಕಾದಿ ಕಾರ್ಯಕ್ರಮಗಳನ್ನು ಮೊದಲಿನಂತೆಯೇ ಚೆಂದಗಾಣಿಸುವುದು ಕಷ್ಟವಾಗು ತ್ತಿದೆ. ಡಾ॥ ಯು. ಕೆ. ಎಲ್. ನಾರಾಯಣರಾಯರು ಮಿತ್ರಮಂಡಳಿಯ ಸ್ಥಾಪನಾಚಾರ್ಯರಲ್ಲೊಬ್ಬರು. ಮಿತ್ರಮಂಡಳಿಯನ್ನು ಸ್ಥಾಪಿಸಿದ ಕಾಲದಲ್ಲಿಯೂ ಆಮೇಲೆ ಕೆಲವು ವರ್ಷಗಳವರೆಗೂ ಮಿತ್ರಮಂಡಳಿಯ ಅಭಿವೃದ್ಧಿಗಾಗಿ ಭೀಮ ಸಾಹಸಪಟ್ಟರು. ಮಿತ್ರ ಮಂಡಳಿಯ ಇಂದಿನ ಸೊಬಗನ್ನು ನೋಡಿ ಸಂತಯಿಸು ವಾಗ ಆ ಶೂರನನ್ನು ನೆನೆಯದಿರಲು ಸಾಧ್ಯವಿಲ್ಲ. ಮೊತ್ತ ಮೊದಲು ಮಿತ್ರಮಂಡಳಿಯನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿದ ತ್ರಿಮೂರ್ತಿಗಳಲ್ಲಿ ಇನ್ನೊಬ್ಬರೂ ಇಂದು ನಮ್ಮ ಮಧ್ಯದಲ್ಲಿಲ್ಲದಿರುವುದು ನಮ್ಮ ದೌರ್ಭಾಗ್ಯ. ದಿವಂಗತ ಡಾ॥ ಮರೋಳಿ ಸಂಜೀವರಾಯರು ಯುದ್ಧ ಆರಂಭವಾದಮೇಲೆ ಭಾರತೀಯ ಸೇನೆಯ ವೈದ್ಯಶಾಖೆ ಯನ್ನು ಸೇರಿ, ಭರತಭೂಮಿಯಿಂದ ಇಟಲಿಗೆ ಹೋಗಿ, ಅಲ್ಲಿ ಕೆಸೀನೋ ರಣರಂಗದಲ್ಲಿ ಮಡಿದರು. ದಿವಂಗತರು ಶರೀರಾರೋಗ್ಯಗಳು ತಮ್ಮದಾಗಿರುವವರೆಗೂ ಸದಾ ಮಿತ್ರಮಂಡಳಿಗೆ ನೆರವಾಗುತ್ತಿದ್ದರು. ಕನ್ನಡತಾಯ ಮದರಾಸಿನ ಮನೆಯ ನಂದಾದೀಪದ ಆರೈಕೆಯನ್ನು ಹಿಂದುಳಿದವರ ಕೈಗಳಿಗಿತ್ತು ಸಂಜೀವರಾಯರು ಸಣ್ಣ ವಯಸ್ಸಿನಲ್ಲಿಯೇ ಮಡಿದುದರಿಂದ, ಈ ಹಬ್ಬದ ದಿನ ಗಳಲ್ಲಿಯೂ ಹಬ್ಬದ ಆಚರಣೆಯೊಡನೆ, ಹಬ್ಬದ ಆನಂದೋತ್ಸವಗಳೊಡನೆ, ಮಿತ್ರಮಂಡಳಿ ಕಂಬನಿ ಗರೆಯುತ್ತಿರುವುದು. ಅವರ ನೆನಹು ನಮ್ಮ ಕರ್ತವ್ಯ, ಉದ್ದೇಶಗಳನ್ನು ನಮಗೆ ಸಾರಿ ಹೇಳುತ್ತಿರಲೆಂದು ಮಿತ್ರ ಮಂಡಳಿಯ ಪ್ರಾರ್ಥನೆಯಿದೆ.

ಮೊದಲು ಮಿತ್ರಮಂಡಳಿಯು ಬಹಳಮಟ್ಟಿಗೆ ನಾಟಕ ಮಂಡಳಿಯೊ ಸಂಗೀತ ಸಭೆಯೊ ಆಗಿತ್ತು. ತನ್ನ ಉದ್ದೇಶಗಳಲ್ಲಿ ಹಲವನ್ನು ಮಿತ್ರಮಂಡಳಿಯು ಮರೆತಿತ್ತು. ಆಗಾಗ ಭಾಷಣಗಳನ್ನು ಏರ್ಪಡಿಸುವುದು ಮಂಡಳಿಯ ಒಂದು ಉದ್ದೇಶವಾಗಿತ್ತಾದರೂ, ಮೊದಲಿನ ಹತ್ತು ವರ್ಷಗಳಲ್ಲಿ ಐದೇ ಭಾಷಣಗಳಾಗಿದ್ದುವು. ಕನ್ನಡ ಶಾಲೆಯೊಂದನ್ನು ಸ್ಥಾಪಿಸುವ ಪ್ರಯತ್ನವನ್ನೂ ಮಾಡ ಲಿಲ್ಲ. ೧೦ ವರ್ಷಗಳವರೆಗೂ, ಮಿತ್ರಮಂಡಳಿಯು ತನ್ನ ಸ್ವಂತ ಮಂದಿರದಲ್ಲೇ ಕೂಡುವುದು ಚೆಂದ, ರಾಮ ರಾಯರ 'ಗಾನಮಂದಿರ'ದಲ್ಲೇ ವರ್ಷವೂ ಕೂಡು ವುದು ಚೆಂದವಲ್ಲ, ಹಾಗಾಗಿ ಮಿತ್ರಮಂಡಳಿಯು ಕಟ್ಟಡವೊಂದನ್ನು ಕೊಂಡುಕೊಳ್ಳಬೇಕು ಎಂಬುದನ್ನು ಗ್ರಹಿಸಲಿಲ್ಲ.

ಈ ಉದ್ದೇಶಗಳನ್ನೆಲ್ಲಾ ಫಲಕಾರಿಯಾಗಿಸುವ ಪ್ರಯತ್ನವು ನಡೆದುದು ಅಜ್ಞಾತವಾಸವಾದ ಮೇಲೆಯೇ. ಈಗ ಒಂದು ವರ್ಷದಲ್ಲಿಯೇ ಶ್ರೀ॥ 'ಮಾಸ್ತಿ'ಯವರು, ಶ್ರೀ॥ ಜಿ. ಪಿ. ರಾಜರತ್ನಂ ಅವರು ಮತ್ತು ಶ್ರೀ॥ ಡಿ. ಪಿ. ಬೆಟ್ಟಲ್ ಅವರು — ಇವರುಗಳ ಭಾಷಣಗಳಾಗಿವೆ. ಇನ್ನುಮುಂದೆ ಭಾಷಣಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಯನ್ನು ಕೊಡಬೇಕೆಂದು ಮಿತ್ರಮಂಡಳಿಯ ೧೨ನೆಯ ವಾರ್ಷಿಕಾಧಿವೇಶನದಲ್ಲಿ ಪುನಃ ನಿರ್ಣಯವಾಗಿರುವುದು. ಮಿತ್ರಮಂಡಳಿಗೆ ವಸತಿಯೊಂದಾಗಬೇಕೆಂದು ಹಿಂದಿನ ವರ್ಷ ಕಟ್ಟಡ ಸಮಿತಿಯೊಂದು ರಚಿತವಾಯಿತು. ಈಗಾಗಲೆ ಈ ಸಮಿತಿಯು ೪,೪೬೩ ರೂಪಾಯಿಗಳನ್ನು ಸಂಗ್ರಹಿಸಿರುವುದು. ಡಾ॥ ಯು. ರಾಮರಾಯರೂ, ಶ್ರೀ॥ ಕೆ. ಸೀತಾರಾಮರಾಯರೂ, ಡಾ॥ ಪಿ. ರಾಮ ರಾಯರೂ, ಡಾ॥ ಯು. ಎಲ್. ನಾರಾಯಣರಾಯರೂ ಒಂದೊಂದು ಸಾವಿರ ರೂಪಾಯಿಗಳನ್ನು ಕಟ್ಟಡಕ್ಕಾಗಿ ದಯಪಾಲಿಸಿದ್ದಾರೆ. ಇನ್ನೊಂದು ವರ್ಷದೊಳಗೆ ೧೫ ಸಾವಿರ ರೂಪಾಯಿಗಳನ್ನು ಸಂಗ್ರಹಿಸುವ ಪ್ರಯತ್ನವು ನಡೆಯಲಿದೆ. ಈಗಾಗಲೇ ಕಟ್ಟಡ ಸಮಿತಿಯವರು ಮದರಾಸು ಕಾರ್ಪೊರೇಶನಿನ ಕಮಿಶನರರನ್ನು ಕಂಡು ತ್ಯಾಗರಾಯ ನಗರದಲ್ಲಿ ಒಂದು ತೋಟವನ್ನು ಕೊಂಡು ಕೊಳ್ಳುವ ಕೆಲಸಕ್ಕೆ ತೊಡಗಿದ್ದಾರೆ.

೧೯೪೪ರಲ್ಲಿ ಒಂದು ಶಾಲಾ ಉಪಸಮಿತಿಯೂ ಸ್ಥಾಪಿತವಾಯಿತು. ಈ ಸಮಿತಿಯವರು ಇದೇ ನವಂಬರ್ ೧೮ನೆಯ ದಿನ ರಾವ್‌ಬಹದ್ದೂರು ಬಂಟ್ವಾಳ ಸೀತಾರಾಮ ರಾಯರನ್ನು ಮುಂದಿಟ್ಟುಕೊಂಡು ಕಾರ್ಪೊರೇಶನಿನ ಕಮಿಶನರರನ್ನು ಮಾತನಾಡಿಸಿ, ಅವರಿಂದ, ಮದರಾಸಿನ ಯಾವ ಭಾಗದಲ್ಲೇ ಆದರೂ ಮೂವತ್ತು ಕನ್ನಡ ಮಕ್ಕ ಳನ್ನು ಕೂಡಿಸಿಕೊಟ್ಟಲ್ಲಿ, ಅಲ್ಲಿ ಕಾರ್ಪೊರೇಶನಿನವರೇ ಕನ್ನಡ ಪ್ರಾಥಮಿಕ ಶಾಲೆಯನ್ನು ತೆರೆಯುವುದಾಗಿ ಭರ ವಸೆಯನ್ನು ಪಡೆದಿದ್ದಾರೆ. ೧೯೪೬ನೆಯ ಜೂನ್ ತಿಂಗಳಲ್ಲಿ

ಮದರಾಸಿನಲ್ಲಿ ಒಂದೆರಡು ಕನ್ನಡ ಪ್ರಾಥಮಿಕ ಶಾಲೆಗಳಾಗುವುದನ್ನು ನೋಡುವ ಸಂಭವವಿದೆ. ಮದರಾಸಿನ ಕನ್ನಡಿಗರ ಮಕ್ಕಳಲ್ಲಿ ಹಲವರಿಗೆ ಕನ್ನಡವನ್ನು ಓದುವುದೂ ತಿಳಿದಿಲ್ಲ. ಇನ್ನೂ ಕೆಲವು ಮಕ್ಕಳು ಸದಾ ಮನೆಯಲ್ಲಿ ಕೆಲಸಕ್ಕಿರುವ ತಮಿಳು ಆಳುಗಳೊಡನೆ ಸಂಭಾಷಿಸುವುದರ ಫಲವಾಗಿ ಕನ್ನಡದಲ್ಲಿ ಮಾತನಾಡಿಸಿದರೂ ತಮಿಳಿನಲ್ಲೇ ಮಾರ್ನುಡಿಯಬಲ್ಲವರಾಗಿದ್ದಾರೆ. ಮಿತ್ರಮಂಡಳಿಯ ಪ್ರಯತ್ನದಿಂದ ಈ ನಾಚಿಗೆಗೇಡು ಪರಿಸ್ಥಿತಿಯು ಸುಧಾರಿಸಿತೆಂದರೆ, ಮಿತ್ರಮಂಡಳಿ ಬರಿಯ ನಾಟಕ ಮಂಡಳಿಯಲ್ಲವೆಂದು ಸರ್ವಮಾನ್ಯವಾಗುವುದು.

ಮಿತ್ರಮಂಡಳಿಯು ನವಚೇತನವನ್ನು ಹೊಂದಿರುವುದರ ಲಕ್ಷಣವು ಇನ್ನೊಂದಿದೆ. ಮದರಾಸಿನ ಲೊಯೋಲಾ ಕಾಲೇಜಿನಲ್ಲಿ ಈವರೆಗೆ "ಇಂಟರ್ಮೀಡಿಯೆಟ್" ಮತ್ತು "ಬಿ.ಎ." ತರಗತಿಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳುವುದು ಸಾಧ್ಯವಿತ್ತು. ಆದರೆ ಬರುವ ವರ್ಷದಿಂದ ತಮ್ಮ ಕಾಲೇಜಿನಲ್ಲಿ ಕನ್ನಡಕ್ಕೆ ಎಡೆಯು ದೊರಕಲಿಕ್ಕಿಲ್ಲವೆಂದು ಕಾಲೇಜಿನ ಪ್ರಿನ್ಸಿಪಾಲರು ಕೆಲವು ತಿಂಗಳುಗಳ ಹಿಂದೆಯೇ ಸೂಚಿಸಿದ್ದರು. ಇದೇ ನವಂಬರ್ ೧೮ನೆಯ ದಿನ ಮಿತ್ರಮಂಡಳಿಯ ಶಾಲಾ ಉಪಸಮಿತಿಯು, ಶ್ರೀ॥ ಬಿ. ಸೀತಾರಾಮರಾಯರನ್ನು ಮುಂದಿಟ್ಟುಕೊಂಡು ಲೊಯೋಲಾ ಕಾಲೇಜಿನ ಪ್ರಿನ್ಸಿಪಾಲರನ್ನು ಕಂಡಿತು. ಕನ್ನಡವನ್ನು ತಮ್ಮ ಸಂಸ್ಥೆಯಿಂದ ಹೊರಗೆ ತಳ್ಳಬೇಕೇ ಬೇಡವೇ ಎಂದು ಇನ್ನೂ ನಿಶ್ಚಯವಾಗಿಲ್ಲವೆಂದೂ, ಮುಂದಿನ ವೈಶಾಖದಲ್ಲಿ ಕಾಲೇಜಿನ ಕಾರ್ಯನಿರ್ವಾಹಕ ಮಂಡಳಿಯು ಈ ವಿಷಯವನ್ನು ಚರ್ಚಿಸುವಾಗ, ತಮ್ಮ ಕಾಲೇಜಿನಲ್ಲಿ ಇನ್ನು ಮುಂದೆಯೂ ಕನ್ನಡಕ್ಕೆ ಎಡೆಯನ್ನು ಕೊಡಬೇಕೆಂದು ತಾವೇ ವಾದಿಸುವುದಾಗಿಯೂ ಕನ್ನಡಿಗರೇ ಆಗಿರುವ ಪ್ರಿನ್ಸಿಪಾಲರು ಭರವಸೆಯಿತ್ತಿದ್ದಾರೆ. ಮಹಿಳೆಯರಿಗಾಗಿಯೇ ಇರುವ ಕ್ವೀನ್‌ಮೇರೀ ಕಾಲೇಜಿನಲ್ಲಿಯೂ ಕನ್ನಡಕ್ಕೆ ಪುನಃ ಸ್ಥಾನ ದೊರೆಯಬೇಕೆಂದು ಸದ್ಯದಲ್ಲಿಯೇ ಮಿತ್ರಮಂಡಳಿ ಕೇಳಲಿರುವುದು.

ಕನ್ನಡಿಗರ ಹಕ್ಕುಬಾಧ್ಯತೆಗಳ ರಕ್ಷಣೆಗಾಗಿಯೇ ಇರುವ ಮಿತ್ರಮಂಡಳಿಯೇ ಮದರಾಸಿನ ಅಖಿಲ ಭಾರತ ರೇಡಿಯೋ ನಿಲಯದಲ್ಲಿ ಮೊತ್ತಮೊದಲು ಕನ್ನಡ ಕಾರ್ಯಕ್ರಮಗಳನ್ನು ಕೈಕೊಂಡುದು. ೧೯... "ಪುರಂದರದಾಸ" ಮತ್ತು "ರತ್ನಾವಳೀ" ಚಿಕ್ಕ ನಾಟಕಗಳನ್ನೂ ೧೯೪೪ರಲ್ಲಿ "ಮಹಾ... ಯನ್ನೂ ಮಿತ್ರಮಂಡಳಿಯವರು ಬ್ರಾಡ್... ಮಾಡಿರುವರು. ದಕ್ಷಿಣ ಭಾರತದ ಮುಖ್ಯ ಪಟ್ಟ... ಮದರಾಸಿನ ಬಾನುಲಿಯಲ್ಲಿ ದ್ರಾವಿಡ ಭಾಷೆಗಳ... ಸಮಾನಮನ್ನಣೆಯಿರುವುದರ ಬದಲಾಗಿ ಪ್ರತಿ... ಕನ್ನಡ, ಮಲೆಯಾಳಿ ಭಾಷೆಗಳಿಗೆ ದೊರಕುತ್ತಿ... ಬರಿಯ ಐದ್ಯೆದು ನಿಮಿಷಗಳು. ಕೆಲವು ತಿಂ... ಹಿಂದೆ ಕನ್ನಡದ ಪಾಲಿಗೆ ಬಂದಿದ್ದ ಐದು ನಿಮಿಷ... ಕಸಿದುಕೊಂಡು ಮಲೆಯಾಳ ಭಾಷೆಗೆ ಕೊಡು... ನಿರ್ಣಯವಾಗಿತ್ತು. ಮಿತ್ರಮಂಡಳಿಯು ಆಕ್ಷೇ... ಮೇಲೆ ಈಗ ಪುನಃ ಐದು ನಿಮಿಷಗಳು ಕ... ದೊರೆತಿವೆ. ಸದ್ಯದಲ್ಲಿಯೇ ದಿಲ್ಲಿಯ ಅಧಿಕಾ... ಬರೆದುಕೊಂಡು ಇದಕ್ಕೂ ಹೆಚ್ಚಿನ ಅವಕಾ... ಕನ್ನಡಕ್ಕೆ ದೊರಕಿಸುವ ಹಂಚಿಕೆಯೂ ಇದೆ.

ಮದರಾಸಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ... ಬೆಳವಣಿಗೆಗಾಗಿ ಸಾಹಸಪಡುತ್ತಿರುವುದೂ ... ಮಂಡಳಿಯೇ. ಇತ್ತೀಚೆಗೆ ಮದರಾಸಿನ ... ಕನ್ನಡಿಗರು ಕನ್ನಡ ಸಾಹಿತ್ಯ ಪರಿಷತ್ತಿನ ... ರಾಗಿರುವುದಕ್ಕೆ ಪ್ರಶಂಸೆಯು ಮಿತ್ರಮಂಡಳಿಗೇ ... ತಕ್ಕದ್ದು. ಹನ್ನೆರಡು ವರ್ಷಗಳಿಂದಲೂ ಕ... ಬಾವುಟವನ್ನು ಎತ್ತಿ ಹಿಡಿದುಕೊಂಡು, ಮದ... ಕನ್ನಡಿಗರಲ್ಲಿ ಸ್ವಾಭಿಮಾನವನ್ನು ಉದ್ರೇಕಿಸುವು... ನಿರಂತರ ಪರಿಶ್ರಮಿಸುತ್ತಿರುವ ಕರ್ನಾಟಕ ... ಮಂಡಳಿಯ ಜೀವನದ ಹಾಡಿಗೆ ಈಗ ಯೋಗ್ಯ ... ಯೆಂಬಂತೆ, ೨೯ನೆಯ ಕನ್ನಡ ಸಾಹಿತ್ಯ ಸಮ್ಮೇ... ಮಿತ್ರಮಂಡಳಿಯ ಆಹ್ವಾನದ ಮೇರೆಗೆ ಮದರಾ... ನಡೆಯಲಿರುವುದು. ಹೀಗೆ ಮಿತ್ರಮಂಡಳಿ... ಸಾಹಿತ್ಯ ಪರಿಷತ್ತಿಗೂ, ಸಾಹಿತ್ಯ ಸಮ್ಮೇಲನದಿಂದ... ಮಂಡಳಿಗೂ ಪರಸ್ಪರ ಶಕ್ತಿಸಹಾಯಗಳು ದೊ... ಮಿತ್ರಮಂಡಳಿ ಸದಾ ಮದರಾಸಿನಲ್ಲಿ ಕನ್ನಡದ ... ಯನ್ನು ಕಾಯುವುದಾದರೆ, ಕನ್ನಡಿಗರೂ ಕನ್ನಡ ಸಾ... ಪರಿಷತ್ತಿನ ಅಂಕಿತದಲ್ಲಿ, ಕನ್ನಡವು ನಮ್ಮದು ... ಅಕ್ಕರೆಯಿಂದ, ತಾಯಿನಾಡಿನ ಸೇವೆಯಲ್ಲಿ ...

ಪ್ರಾಂತಗಳ ಬೇಧಗಳನ್ನು ಮರೆತು, ನಮ್ಮ ಭಾಷೆ, ನಮ್ಮ ಸಂಸ್ಕೃತಿ, ನಮ್ಮ ಕಲೆ, ನಮ್ಮ ನಾಡು ಇವುಗಳ ಅಭಿವೃದ್ಧಿಗಾಗಿ ದುಡಿವುದಾದರೆ, ಕನ್ನಡನುಡಿಯು ಮತ್ತೆ ಸುದಿನಗಳನ್ನು ಕಾಣುವುದಿದೆ, ಕನ್ನಡತಾಯಿ ಮತ್ತೆ ಹೊಸ ಸೊಬಗಿನಿಂದ ಬೆಳಗುವವಳಿದ್ದಾಳೆ, ನಮ್ಮ ಚೆಲುವ ಕನ್ನಡನಾಡು ಮತ್ತೆ ಹೊಸ ಚೆಲುವಿನಿಂದ ಉದಯವಾಗಲಿದೆ ಎಂಬ ಆಶೆಯು ನಿರಾಶೆಯಾಗಲಾರದು.

ಪಡುಮುನ್ನೂರು ನಾರಾಯಣರಾವ್,
ಲಾ ಕಾಲೇಜು, ಮದರಾಸು

## ಕಲಿಯಾಗಿ ಬಾ ಕೃಷ್ಣ

ಕೊಳಲದನಿ....ಕೃಷ್ಣ!......ಉರಿಬಿಸಿಲು........ಭಾರತದಳಲು
ಕೊಳಲನೊಲ್ಲೆನು ಎಂದು ಕಿವಿಮುಚ್ಚಿ ಬಾನಗಲ ಕಣ್ತೆರೆದು
ಶತಮಾನಗಳ ಹೊಡೆಬಾಳ ನೆನೆದು ಮನದಲಿ ನೂರು ಮುಳ್ಳುಮುರಿದು
ನಿಟ್ಟುಸಿರ ತುಯ್ಯು ಕಂಪಿಸುತಿರಲು, ನೀನಂದು ಗೋಕುಲದ ಗೋಷ್ಠಿಯನು ತೊರೆದು
ಭಾರತದ ಇತಿಹಾಸವೇದಿಕೆಗೆ ಬಂದಂತೆ, ಒಲಿದು ಬಂದೆಯ ಕೃಷ್ಣ, ಕೊಳಲ ಹಿಡಿದು?
ನೆಳಲಿಹುದೆ ನಿನ್ನ ಕೊಳಲಿಗೆ ಇಲ್ಲಿ?..ಶಾಂತಿಯೇ? ತಂಬೆಲರೆ? ಬೆಳ್ದಿಂಗಳೆ?
ರಾಧೆಯನು ಕುಣಿಸಿ ಬಂದಂತೆ, ಮುರಲಿಯನೂದಿ, ಸೆಳೆವ ಮಂತ್ರವು ಗೆಲ್ಲದಿಲ್ಲಿ.
ಇದು ಸಮಯವಲ್ಲ ಹಂಸಧ್ವನಿಗೆ; ಸ್ವಾಗತವು ಸಿಂಹಧ್ವನಿಗೆ ಇಂದು, ನಾಡ ನೋಡು.
ಬಹುಕಾಲ ಬಳಲಿಸಿದ ಪಾಡು ಪೀಡೆಗಳಿಂದ ಹೊಸಹುಟ್ಟು ಮೂಡುತಿಹುದು.
ಚಂದಿರನ ತೊರೆದು, ಚಂದ್ರಾಯುಧವ ಪಿಡಿದೆದ್ದು, ವಜ್ರಪರ್ವತಗಳಲಿ ತೋಳಬೆಳಸಿ ಹೊಳೆವಳೀ ವೀರಜನನಿ.
ನೀಲಾಂತರಿಕ್ಷದಲಿ ಧೂಮಕೇತುಗಳಲೆದು ತೆಗೆದ ಬೈತಲೆ, ಮುಡಿಗೆ ಕೆಂಪುಸಿಡಿಲು;
ವಹ್ನಿ ಪ್ರವಾಹದಲಿ ಮಿಂದು ಬಂದಿಹಳೀಕೆ ಬಿರುಗಾಳಿ ಬಣ್ಣವುಟ್ಟು;
ನಾಡಿನ ಅಲಕ್ಷ್ಮಿಯನು ತೊಡೆದು ತೂರುವೆನೆಂದು ಹಟತೊಟ್ಟು ಬಂದಿಹಳು ನಾಡದೇವಿ.
ಸಿಂಹಗಳನಾಡಿಸುವ ವೀರಪುತ್ರರ ಕಂಡು, ಬಿಡುಗಡೆಯ ಕನಸು ಹೊಳೆದು,
'ಗೆದ್ದು ಬಾಳಿರಿ, ಬಿದ್ದು ಗೋಳಾಡಿ ಫಲವಿಲ್ಲ ನಾನಿಹೆನು' ಎನ್ನುತಿಹಳು.
ಕೊಳಲ ನೆನೆದು ಬಾ ಸಪ್ತಸ್ವರಂಗಳನು ಸಪ್ತಸಾಗರಗಳಲಿ ಅಬ್ಬರಿಸಿ ಬಾ ತಾರೆಗಳೆಲ್ಲ ತತ್ತರಿಸಿ
ಬಾನು ತಿರ್ರನೆ ತಿರುಗಿ ನೆಲನಡುಗಿ ದಿಕ್ಕು ದಿಕ್ಕಿಗೆ ಮಿಂಚು ಹಾರುತಿರಲಿ.
ಕೈ ಹಿಡಿದ ಕೃಷ್ಣ ಕಲಿಯಾಗಿ, ಚಕ್ರವ ಹಿಡಿದು, ಧರ್ಮಚಕ್ರಾಧಿಪತಿಯಾಗಿ
ತನ್ನ ಮಕ್ಕಳು ಬಲಿತು ವಜ್ರದೇಹಿಗಳಾಗಿ, ಧೀರರಾಗಿ
ತೇಜಸ್ವಿಗಳು ಶಕ್ತಶಾಂತಿಯಲಿ ನಲಿವುದನು ನೋಡಿ ಭಾರತಲಕ್ಷ್ಮಿ ಕೆನ್ನೆಯುಬ್ಬಿ
ಬಂಧನದ ಭಂಗವನು ಮರೆತು ಚಂದಿರನಂತೆ ನಿನ್ನೆದೆಗೆ ತಲೆಯನಿಟ್ಟು
ಕೊಳಲೂದು ಎನುವನಕ ಕೊಳಲ ಮನ್ನಿಸು ಕೃಷ್ಣ; ನೆಳಲಿಲ್ಲ ಕೊಳಲಿಗಿಂದು.

ಕೆ. ಎಸ್. ನರಸಿಂಹಸ್ವಾಮಿ

# ಕನ್ನಡ ಜನಾಂಗದ ಜೀವನ ಸಮಸ್ಯೆ

ಕ್ರಿಸ್ತ ಶತಾಬ್ದಕ್ಕಿಂತ ಮೊದಲಿನಿಂದಲೂ ಕನ್ನಡನಾಡು ಅತ್ಯಂತ ವೈಭವಶಾಲಿಯಾಗಿತ್ತೆಂಬುದು ಎಲ್ಲರಿಗೂ ಮನಗಂಡಮಾತು. ಬಾಬಿಲೋನ, ರೋಮ, ಐಗುಪ್ತ ಮೊದಲಾದ ಅತಿ ಪ್ರಾಚೀನ ಪಾಶ್ಚಿಮಾತ್ಯ ಸಾಮ್ರಾಜ್ಯಗಳೊಂದಿಗೆ ಕನ್ನಡ ಜನಾಂಗವು ದೊಡ್ಡ ದೊಡ್ಡ ಹಡಗುಗಳ ಮೂಲಕ ವ್ಯಾಪಾರ ವ್ಯವಹಾರವನ್ನು ಸಾಗಿಸಿ ವಿಪುಲವಾದ ಧನವನ್ನು ಸಂಪಾದಿಸಿ ತರುತ್ತಿತ್ತೆಂಬುದಕ್ಕೆ ಐತಿಹಾಸಿಕ ಆಧಾರಗಳುಂಟು. ಮುಂದೆ ಸಾವಿರಾರು ವರ್ಷಗಳಲ್ಲಿ ಕನ್ನಡ ರಾಜಕಾರಣಪ್ರವೀಣರೂ, ವೀರರೂ, ಶೂರರೂ, ಸಮರಶಾಸ್ತ್ರ ಧುರಂಧರರೂ ತಮ್ಮ ಕೌಶಲ್ಯದಿಂದ, ಪರಾಕ್ರಮದಿಂದ, ಶೌರ್ಯದಿಂದ, ಯುದ್ಧಕಲಾ ನಿಪುಣತೆಯಿಂದ ಮಹಾನ್ ಮಹಾನ್ ರಾಜ್ಯಗಳನ್ನೂ ಸಾಮ್ರಾಜ್ಯಗಳನ್ನೂ ಕಟ್ಟಿ, ನ್ಯಾಯಬುದ್ಧಿಯಿಂದ ಪ್ರಜಾಪಾಲನ ದಕ್ಷರಾಗಿ ಎಲ್ಲ ಕಡೆಗೆ ಸುಖ ಸೌಹಾರ್ದ ಸಂಪತ್ತು ನೆಲೆಗೊಳ್ಳುವಂತೆ ಪರಿಶ್ರಮಪೂರ್ವಕ ಸಾಹಸಮಾಡಿದರು. ಆದುದರಿಂದ ಆಕಾಲದ ಕನ್ನಡ ಜನಾಂಗವು ಎಲ್ಲ ವಿದ್ಯಾ ಕಲಾಕೌಶಲ್ಯಗಳಿಗೆ ಬೀಡಾಗಿ, ಸರ್ವ ಸಂಪತ್ಸಮೃದ್ಧವಾಗಿ ದೀರ್ಘಾಯುರಾರೋಗ್ಯ ಸಂಪನ್ನ ಪ್ರಜಾವರ್ಗದಿಂದ ತುಂಬಿಕೊಂಡು ಎಲ್ಲೆಲ್ಲಿಯೂ ಉತ್ಕರ್ಷದ ಉಕ್ಕಿನಿಂದ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಗಳಿಸಿಕೊಂಡಿತು.

ಸಾವಿರಾರು ವರ್ಷಗಳವರೆಗೆ ಈ ಮೇರೆಗೆ ಉನ್ನತಿಯ ಶಿಖರವನ್ನೇರಿ ಮೆರೆದ ಕನ್ನಡ ಜನಾಂಗಕ್ಕೆ ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ಅಳಿಗಾಲದ ಆರಂಭವಾಯಿತು. ರಕ್ಕಸತಂಗಡಗಿಯ ಸಮರಕುಂಡದಲ್ಲಿ ಆಹುತಿಯಾಗಿ ಸುಟ್ಟು ಬೂದಿಯಾದ ಕನ್ನಡ ಜನಾಂಗದ ವೈಭವವನ್ನು ಪುನಃ ಚೇತರಿಸಿ ಎಬ್ಬಿಸಲು ಸುಮಾರು ಎರಡು ನೂರು ವರ್ಷಗಳವರೆಗೆ ಮಾಡಿದ ಸಾಹಸಗಳೆಲ್ಲವೂ ಬಯಲಾಗಿ ಹೋದವು. ಆದರೆ ಮೈಸೂರು ಅರಸು ಮನೆತನವೆಂಬ ಅಭಿಧಾನದಿಂದ ಕನ್ನಡ ಕುಲದ ಶಾಖೆಯೊಂದು ದಕ್ಷಿಣದಲ್ಲೊಂದು ಕಡೆಗೆ ಮೊಳೆತು, ಚಿಗುತು, ಗಿಡವಾಗಿ, ಮರವಾಗಿ, ತನ್ನ ಕೃಪಾಛತ್ರದಲ್ಲಿ ಕನ್ನಡ ಸಾಹಿತ್ಯ ವಾಙ್ಮಯ ವಿವಿಧ ಕಲಾ ನೈಪುಣ್ಯ ಮೊದಲಾದವುಗಳಿಗೆ ಆಶ್ರಯವನ್ನಿತ್ತು ಕನ್ನಡ ಜನಾಂಗದ ಅವಶೇಷ ಕೀರ್ತಿಯನ್ನು ಕಾಯ್ದುಕೊಂಡು ಬೆಳೆಯ ಹತ್ತಿತ್ತು. ನಿರ್ಘೃಣನಾದ ಕಾಲನಿಗೆ ಇದೂ ಸಹನವಾಗದೆ ಟೀಪೂಸುಲ್ತಾನನ ಕಾಲಕ್ಕೆ ಉಂಟಾದ ಐತಿಹಾಸಿಕ ಸ್ಥಿತ್ಯಂತರಗಳ ಮೂಲಕ ಆಗಿನ ಮೈಸೂರು ರಾಜ್ಯವು, ಅಂದರೆ ಪ್ರಾಚೀನ ಕನ್ನಡ ಸಾಮ್ರಾಜ್ಯದ ಅವಶೇಷ ಭಾಗವು ಕೂಡ, ನಾಲ್ಕು ಭಾಗಗಳಾಗಿ ಕತ್ತರಿಸಲ್ಪಟ್ಟು ಆಗಿನ ಈಸ್ಟ್ ಇಂಡಿಯಾ ಕಂಪೆನಿಯ ಮದರಾಸದ ಆಡಳಿತ, ಹೈದರಾಬಾದಿನ ನಿಜಾಮಶಾಹಿ, ಪುಣೆಯ ಪೇಶ್ವೆಶಾಹಿ ಹೀಗೆ ಹಂಚಿಕೊಳ್ಳಲಾಯಿತಲ್ಲದೆ ಸದ್ಯಕ್ಕೆ ಉಳಿದಿರುವ ಮೈಸೂರು ಸಂಸ್ಥಾನದ ಮಟ್ಟಗಿನ ಚಿಕ್ಕ ಪ್ರದೇಶವು ಮಾತ್ರ ಮೈಸೂರು ರಾಜಮನೆತನಕ್ಕೆ ಬಿಡಲ್ಪಟ್ಟಿತು. ಮುಂದೆ ದೇಶದಲ್ಲಿ ಸಂಭವಿಸಿದ ಆಕಸ್ಮಿಕ ರಾಜಕೀಯ ವ್ಯವಹರಣೆಗಳ ಕೋಲಾಹಲದಿಂದ ಇತ್ತ ಮಹಾರಾಷ್ಟ್ರರ ಆಧೀನಕ್ಕೂ ಅತ್ತ ನಿಜಾಮರ ಒಡೆತನಕ್ಕೂ ಒಳಗಾಗಿದ್ದ ಕನ್ನಡನಾಡಿನ ಬಹು ಭಾಗವು ಮತ್ತೆ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತಕ್ಕೆ ಒಳಗಾಗುವ ಸಂದರ್ಭವುಂಟಾಯಿತು.

ಇತ್ತ ಮರಾಟರ ರಾಜ್ಯವನ್ನು ನುಂಗಿನೀರುಕುಡಿದ ಈಸ್ಟ್ ಇಂಡಿಯಾ ಕಂಪೆನಿಯ ಮುಂಬಯಿ ಪ್ರಾಂತದ ಅಧಿಕಾರಿಗಳು ಸೊಲ್ಲಾಪುರದಿಂದ ಬೆಳಗಾಂವಿವರೆಗಿನ ಕನ್ನಡ ನಾಡ ಭಾಗವನ್ನು ತಾವು ಗೆದ್ದುಕೊಂಡ ಪ್ರದೇಶದಲ್ಲಿ ಸಮಾವಿಷ್ಟಗೊಳಿಸಲು ಹಾತೊರೆಯುತ್ತಿದ್ದರು. ನಿಜಾಮರಿಂದ ತಿರುಗಿ ಈಸ್ಟ್ ಇಂಡಿಯಾ ಕಂಪೆನಿಗೆ ದೊರೆತ ಬಳ್ಳಾರಿಯತ್ತಕಡೆಯ ಪ್ರದೇಶವು ಮದರಾಸದೊಳಗಿನ ಅಧಿಕಾರಿಗಳ ಆಧಿಪತ್ಯಕ್ಕೆ ಸೆಳೆಯಲಾಯಿತು. "ಬೆಳಗಾಂವಿಯಿಂದ ಸೊಲ್ಲಾಪುರದವರೆಗಿನ ಭಾಗವನ್ನು ಮುಂಬಯಿ ಆಧಿಪತ್ಯಕ್ಕೆ ಸೇರಿಸಬಾರದು; ಮದರಾಸ ಆಧಿಪತ್ಯಕ್ಕೆ ಒಳಗಾಗಿರುವ ಬಳ್ಳಾರಿ ಮೊದಲಾದ ಕನ್ನಡ ಜನವಸತಿಯ ಪ್ರದೇಶಗಳನ್ನು ಇವು ಪೂರ್ಣವಾಗಿ ಹೋಲುತ್ತವೆ. ಭಾಷೆ, ಸಂಸ್ಕೃತಿ, ಉಡಿಗೆ ತೊಡಿಗೆ, ಜೀವನ ಪ್ರಕಾರ ಮೊದಲಾದ ಎಲ್ಲ ವಿಶಿಷ್ಟ ಬಗೆಗಳಲ್ಲಿ ಈ ಎರಡೂ ಭಾಗಗಳ ಜನರು ಒಂದೇ ಕನ್ನಡ ಕುಲದ

ವರೂ, ಒಂದೇ ಜನಾಂಗದವರೂ ಆಗಿರುತ್ತಾರೆ. ಬೆಳಗಾಂವಿ ಧಾರವಾಡ ಸೊಲ್ಲಾಪುರ ಪ್ರದೇಶಗಳಲ್ಲಿ ಮರಾಟರು ಕೆಲವರು ಬಂದು ನೆಲಸಿರುವರಾದರೂ ಅವರು ಇಲ್ಲಿ ಪರಕೀಯರು. ಇಲ್ಲಿಯ ಜನರನ್ನು ರಾಜಕೀಯ ವರ್ಚಸ್ಸಿನಿಂದ ಆಳಲಿಕ್ಕೆ ಬಂದವರು. ಇವರಲ್ಲಿಯೂ ಇಲ್ಲಿಯ ಸಾಮಾನ್ಯಜನರಲ್ಲಿಯೂ ಯಾವ ವಿಧದ ಸಾಮ್ಯವೂ ಇಲ್ಲ. ಪರಸ್ಪರ ಸಹಾನುಭೂತಿ ಯಂತೂ ಇಲ್ಲವೇ ಇಲ್ಲ. ಹಲಕೆಲವು ಸಂದರ್ಭಗಳಲ್ಲಿ ದ್ವೇಷಾಸೂಯೆಗಳು ಪ್ರಬಲವಾಗಿ ಕಾಣಿಸಿಕೊಳ್ಳುತ್ತವೆ. ಆದುದರಿಂದ ಮುಂಬಯಿ ಆಧಿಪತ್ಯಕ್ಕೆ ಸೇರಿಸಬೇಕೆನ್ನುವ ಈ ಬೆಳಗಾಂವಿ ಸೊಲ್ಲಾಪುರ ಪ್ರದೇಶದ ಕರ್ನಾಟಕ ಭಾಗವನ್ನು ಬಳ್ಳಾರಿ ಚಿತ್ತೂರು ಭಾಗಗಳೊಂದಿಗೆ ಸೇರಿಸಿ ಈ ಸಮಭಾವನೆಯ ಸಮಸಂಸ್ಕೃತಿಯ, ಸಾಮಾನ್ಯ ಭಾಷೆಯ ಜನಾಂಗವನ್ನೆಲ್ಲ ಒಂದೇ ಆಡಳಿತದಲ್ಲಿರಿಸು ವದು ಯುಕ್ತವಾಗಿದೆ. ಹೀಗೆ ಮಾಡಿದರೆ ಈ ಜನಾಂ ಗವು ತನ್ನ ಆಂತರಿಕ ವಿಕಾಸವನ್ನು ಎಲ್ಲ ಬಗೆಯಿಂದಲೂ ಮಾಡಿಕೊಳ್ಳುವುದಕ್ಕೆ ಅನುಕೂಲಮಾಡಿಕೊಟ್ಟಂತಾಗು ವದು" ಎಂಬ ಅರ್ಥದ ವರದಿಯನ್ನು ಆ ಕಾಲಕ್ಕೆ ಇಲ್ಲಿಯ ಈಸ್ಟ್ ಇಂಡಿಯಾ ಕಂಪೆನಿಯ ಪ್ರಮುಖ ಸೇನಾಧಿಪತಿಗಳೂ ರಾಜಕೀಯ ವ್ಯವಹಾರ ನಿಯಂತ್ರ ಕರೂ ಆಗಿದ್ದ "ಸರ್ ಥಾಮಸ್ ಮನ್ರೊ" ಎಂಬವರು ತಮ್ಮ ಮೇಲಧಿಕಾರಿಗಳ ಕಡೆಗೆ ಕಳಿಸಿರುವದು ಪ್ರಸಿದ್ಧ ವಾಗಿದೆ. ಇದೇ ಸರ್ ಥಾಮಸ್ ಮನ್ರೊ ಇವರು ಮುಂದೆ ಮದರಾಸು ಪ್ರಾಂತದ ಗವರ್ನರಾಗಿಯೂ ನೇಮಿಸಲ್ಪಟ್ಟರು. ಕನ್ನಡ ಜನಾಂಗದ ಸರ್ವ ವಿಧದ ವಿಕಾಸಕ್ಕೆ ಅವಶ್ಯಕವಾದ ಏಕೀಕರಣದ ಕಲ್ಪನೆಯು ಸರ್ ಥಾಮಸರಂಥ ಪರಕೀಯರ ಮನಸ್ಸಿಗೂ ಹೋದ ಶತಮಾನದ ಆರಂಭದಲ್ಲಿಯೇ ಹೊಳೆದಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈಗ ಏಕೀಕರಣಕ್ಕಾಗಿ ಅವ್ಯಾಹತ ಹೆಣಗುತ್ತಿರುವ ಕನ್ನಡ ನಾಡಿಗೆ ಈ ಮಾತು ನಿಜವಾಗಿಯೂ ಉದ್ಬೋಧಕವಾಗಿಲ್ಲವೆ?

ತಮ್ಮವರೇ ಆದ ವರಿಷ್ಠಾಧಿಕಾರಿಗಳ ಮೇಲೆ ಹೇಳಿದ ಹಿತೋಕ್ತಿಗಳನ್ನು ಅಲಕ್ಷಿಸಿ ಈಸ್ಟ್ ಇಂಡಿಯಾ ಕಂಪೆನಿಯ ಶ್ರೇಷ್ಠ ಸೂತ್ರಧಾರರು ಕನ್ನಡ ನಾಡನ್ನು—ಅರ್ಥಾತ್ ಕನ್ನಡ ಜನಾಂಗವನ್ನು—ತಮ್ಮ ಆಡಳಿತದ ಅನುಕೂಲ ವನ್ನು ಮಾತ್ರ ಲಕ್ಷಿಸಿ ತುಂಡು ತುಂಡುಮಾಡಿ ಚೆಲ್ಲಿದರು. ಇದರ ಪರಿಣಾಮವಾಗಿ ನಮ್ಮ ಕನ್ನಡ ಜನಾಂಗವು ಕಳೆದ ನೂರು ವರ್ಷಗಳಿಗಿಂತ ಹೆಚ್ಚುಕಾಲ ಇಪ್ಪತ್ತೆರಡು ಬೇರೆ ಬೇರೆ ಆಡಳಿತಗಳಿಗೆ ಒಳಗಾಗಿ ತನ್ನ ಜೀವನವನ್ನು ಹಾಗೂ ಹೀಗೂ ಸಾಗಿಸಬೇಕಾಗಿ ಬಂದಿದೆ. ಕನ್ನಡ ಜನಾಂಗದ ಮೂಲಭಾಷೆಯಾದ ಕನ್ನಡಕ್ಕೇ ಮೊದಲು ಮೊದಲು ಎಲ್ಲಿಯೂ ಶಿಕ್ಷಣದ ಅನುಕೂಲವಿರಲಿಲ್ಲ. ಈಗಲೂ ಬಹು ಭಾಗಗಳಲ್ಲಿ ಇದೇ ಗೋಳು ಕಟ್ಟಿಟ್ಟದೆ. ರಾಜಕೀಯ ವ್ಯವಹರಣೆಯಲ್ಲಿ, ಕೋರ್ಟು ಕಚೇರಿಗಳಲ್ಲಿ ವಿಶ್ವವಿದ್ಯಾ ನಿಲಯಗಳ ಶಿಕ್ಷಣ ಕ್ಷೇತ್ರಗಳಲ್ಲಿ, ಡಿಸ್ಟ್ರಿಕ್ಟ್ ಬೋರ್ಡ್ ಮುನಿಸಿಪಾಲಿಟಿ ಮೊದಲಾದ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಿ ಎಲ್ಲೆಲ್ಲಿಯೂ ಇಂಗ್ಲಿಷರ ಸಾಮ್ರಾಜ್ಯದ ಒತ್ತಾಸೆಯಿರುವುದಲ್ಲದೆ ಅಲ್ಲಲ್ಲಿ ಮರಾಠೀ, ತೆಲುಗು, ತಮಿಳು, ಮಲೆಯಾಳ ಮೊದಲಾದ ನೆರೆಭಾಷೆಗಳ ಹಾವಳಿಯು ಅಖಂಡವಾಗಿ ನಡೆದೇ ಇರುತ್ತದೆ. ಈಗ ಸುಮಾರು ಅರ್ಧ ಶತಮಾನದಿಂದಲೂ ಕನ್ನಡ ಜನಾಂ ಗದ ಜೀವಾಳವಾದ ಕನ್ನಡ ಭಾಷೆಗೆ ಎಲ್ಲ ಕನ್ನಡನಾಡ ಭಾಗಗಳಲ್ಲಿ ಅಖಂಡವಾದ ಅಪ್ರತಿಬದ್ಧವಾದ ಉನ್ನತಿಯ ಮಾರ್ಗವು ಅವ್ಯಾಹತವಾಗಿ ದೊರೆಯಲೇಬೇಕೆಂಬುದಕ್ಕೆ ಅವಿರತ ಪ್ರಯತ್ನವಾಗುತ್ತ ನಡೆದಿದ್ದರೂ ಸಾಕಷ್ಟು ಫಲಪ್ರದವಾಗಿಲ್ಲವೆಂಬುದು ನಾಚಿಕೆಯಿಂದ ತಲೆಬಗ್ಗಿಸಿ ಒಡಂಬಡತಕ್ಕ ಸಂಗತಿಯಾಗಿದೆ. ಇಂದಿಗೆ ಕನ್ನಡ ಜನಾಂಗದ ಜೀವನ ಸರ್ವಸ್ವಕ್ಕೆ ಮೂಲಾಧಾರದಂತಿರುವ ಮೈಸೂರಿನ ರಾಜ್ಯದಲ್ಲಿಯೇ ಕನ್ನಡಕ್ಕೆ ತಕ್ಕ ಮನ್ನಣೆ ಯಿಲ್ಲದಾಗಿದೆ. ಮೈಸೂರ ಅರಸರು ಆಡುವ ಮಾತು ಕನ್ನಡ, ಅರಮನೆಯ ಸತಿಯರು ಆಡುವ ಮಾತು ಕನ್ನಡ, ಅಲ್ಲಿಯ ಪರಿಜನ ಪ್ರಭೃತಿಗಳು ಆಡುವ ಮಾತು ಕನ್ನಡ, ಮೈಸೂರು ಸೀಮೆಯ ಪ್ರಜೆಗಳೆಲ್ಲರು ಆಡುವ ಮಾತು ಬಹುಶಃ ಕನ್ನಡ. ಈ ಅನುಸಂಧಾನದಿಂದ ನೋಡಿದರೆ ರಾಜ್ಯಾಂಗದ ವಿಭಾಗಗಳಲ್ಲೆಲ್ಲ ಕನ್ನಡದ ಹೊರತು ಬೇರೆ ಭಾಷೆಗೆ ರಾಜ್ಯದಾಡಳಿತದಲ್ಲಿ ಪ್ರವೇಶವೇ ಇರಕೂಡದು. ಮುಮ್ಮಡಿ ಕೃಷ್ಣರಾಜ ಒಡೆಯರವರ ಆಡಳಿತದಲ್ಲಿ ಇದೇ ವಿಧಾನವಿದ್ದಿರಬೇಕೆಂದು ಹೇಳಿದರೆ ತಪ್ಪಾಗ ಲಾರದು. ಅವರ ಸ್ವಹಸ್ತಾಂಕಿತ ಮುದ್ರಿಕೆಯುಳ್ಳ ರಾಜ ರಾಯಸಗಳೊಂದೆರಡು ಹಲಕೆಲವರ ಕಣ್ಣಿಗೆ ಬಿದ್ದದ್ದು

ಉಂಟು. ಆದರೆ ಕನ್ನಡ ಜನಾಂಗದ ದುರ್ದೈವದಿಂದ ಕೃಷ್ಣರಾಜ ಒಡೆಯರ ಆಳಿಕೆಯು ರಾಹುಗ್ರಸ್ತವಾಗಿ ಕಂಪೆನಿಯ ನೇತೃತ್ವದ ಕಮಿಷನರ ಆಳಿಕೆಯು ತಲೆದೋರಿ ನಡೆದು ಅಖಂಡ ೫೦ ವರ್ಷಗಳವರೆಗೆ ಪರಕೀಯ ಬ್ರಿಟಿಷರ ಆಳಿಕೆಯ ಸಸಿಯನ್ನೇ ಮೈಸೂರಿನಲ್ಲಿ ತಂದು ನಾಟಿದಂತಾಯಿತು. ಹೀಗೆ ನಾಟಿದ ಈ ಪರಕೀಯ ಪ್ರಭುತ್ವಪದ್ಧತಿಯ ನಾಟಿಗೆ ನೀರೆರೆದು ಗೊಬ್ಬರ ನೀಡಿ ಕಸಕಡ್ಡಿ ತೆಗೆದು ಅದನ್ನು ತಮ್ಮ ಬುದ್ಧಿಗೆ ಸರಿಯಾದ ರೀತಿಯಲ್ಲಿ ಬೆಳಸಿಕೊಂಡು ಬಂದವರೆಲ್ಲ ಬಹುಶಃ ತಮಿಳನಾಡ ಧುರೀಣ ರಾಜಕಾರಣಿಗಳು. ಅವರ ಅನುಸಂಧಾನದಿಂದ, ವರ್ಚಸ್ಸಿನಿಂದ, ಆತ್ಮೀಯತೆಯ ಅಭಿಮಾನದಿಂದ ಮೈಸೂರು ರಾಜ್ಯಕಾರಭಾರದ ವರಿಷ್ಠಾಧಿಕಾರಗಳೆಲ್ಲ ಪರಭಾಷೆಯವರ ಸೊತ್ತಾಗಿ ಕನ್ನಡವು ಎಲ್ಲೆಲ್ಲಿಯೂ ತೊತ್ತಾಗಿಯೇ ಉಳಿಯಿತು. ಇಂದಿಗೂ ಈ ಪರಿಸ್ಥಿತಿಯಲ್ಲಿ ವಿಶೇಷ ಬದಲಾವಣೆಯಾಗಿರುವದು ಅನುಭವಕ್ಕೆ ಬರುವದಿಲ್ಲ. ಪ್ರಜಾ ಪ್ರಭುತ್ವದ ಪ್ರಕಾಶವು ತನ್ನ ಪ್ರಭಾವವನ್ನು ಜಗತ್ತಿನಲ್ಲೆಲ್ಲ ಬೀರುತ್ತ ನಡೆದಿರುವ ಈ ಹೊಸಗಾಲದಲ್ಲಿಯೂ ಮೈಸೂರಿನ ರಾಜ್ಯಾಂಗ ಸೂತ್ರಧಾರರು ಕಣ್ಣುಬಿಟ್ಟು ನಾಲ್ಕು ನಿಟ್ಟಿಗೆ ದೃಷ್ಟಿಯನ್ನೆರಚಿದ ಲಕ್ಷಣಗಳು ಕಂಡು ಬರುವದಿಲ್ಲ. ಮೈಸೂರಿನ ಪ್ರಜಾಪ್ರತಿನಿಧಿಗಳ ಅಧಿವೇಶನದಲ್ಲಿ ಹಲ ಕೆಲವು ಪ್ರಜಾಪ್ರತಿನಿಧಿಗಳು ಕನ್ನಡದ ಬಾಧ್ಯತೆಯನ್ನು ಎತ್ತಿ ಹಿಡಿದು ಕನ್ನಡದಲ್ಲಿ ಮಾತನಾಡುವದನ್ನು ಮೈಸೂರಿನ ಕನ್ನಡ ಪತ್ರಿಕೆಗಳಲ್ಲಿ ಓದಲು ದೊರೆಯುತ್ತಿರುವದೇನೋ ನಿಜ. ಆದರೆ ಇಷ್ಟರಿಂದ ಕನ್ನಡ ರಾಜ್ಯರಮಾರಮಣರ ರಾಜ್ಯದಲ್ಲಿ ಕರ್ನಾಟಕ ಸಿಂಹಾಸನಾಧೀಶ್ವರರೆಂಬ ವಂಶಪರಂಪರಾಗತ ಬಿರುದಿನಿಂದ ಅಲಂಕೃತವಾದ ಮೈಸೂರೊಡೆಯರ ಆಂತರಿಕ ಆಡಳಿತದಲ್ಲಿ ಕನ್ನಡಕ್ಕೆ ಯಾವ ಸ್ಥಾನಮಾನವು ದೊರೆತಂತಾಯಿತು?

ಶಿಲ್ಪಕಲಾ ವಿಜ್ಞಾನ ಶಿರೋಮಣಿಗಳೆಂದೂ ರಾಜ್ಯಕಾರ್ಯನಿರ್ವಹಣ ಧುರೀಣರೆಂದೂ ವಿಶ್ವವ್ಯಾಪ್ತ ಕೀರ್ತಿವಂತರಾದ ಸರ್ ವಿಶ್ವೇಶ್ವರಯ್ಯನವರ ಕೈಗೆ ಮೈಸೂರಿನ ರಾಜ್ಯದಾಡಳಿತದ ಸೂತ್ರಗಳು ಬಂದ ಕಾಲಕ್ಕೆ ಅಖಿಲ ಕರ್ನಾಟಕದ ಕನ್ನಡ ಪ್ರೇಮಿಗಳ ಸಹಯೋಗ ಸಹಕಾರಗಳಿಂದ ೧೯೧೫ರಲ್ಲಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತು. ಅಂದಿನಿಂದ ಕನ್ನ ಜನಜೀವನದಲ್ಲಿ ಸ್ವಭಾಷೆಯನ್ನು ಉಳಿಸಿ ಬೆಳ ಕೆಲಸಕ್ಕೆ ಹೆಚ್ಚಿನ ಪ್ರೋತ್ಸಾಹವು ದೊರೆತು ನುಡಿಯು ಬರಬರುತ್ತ ಚೆನ್ನಾಗಿಯೇ ಎಲ್ಲ ಯಿಂದಲೂ ಮುಂದುವರಿಯಹತ್ತಿದೆ ಎಂಬುದು ಸ ಥಾನದ ಸಂಗತಿಯಾಗಿದೆ. ಅದೇ ಸುಮಾರಿಗೆ ಮೈಸ ವಿದ್ಯಾಪೀಠದ ಪ್ರಾಣಪ್ರತಿಷ್ಠೆಯೂ ಶ್ರೀಮನ್ಮಹಾ ಕೃಷ್ಣರಾಜ ಒಡೆಯರವರಿಂದ ಜರುಗಿ ಮೈಸೂರಿನ ಜನರಿಗೆ ಆಧುನಿಕ ವಿದ್ಯಾ ಸಂಪಾದನೆಯ ಹೆಚ್ಚಿನ ಕೂಲಗಳೂ ಒದಗಿಸಲಾದವು. "ತಮ್ಮ ಪ್ರಜಾ ದಲ್ಲಿ ಹೆಚ್ಚು ಹೆಚ್ಚಾಗಿ ಆಧುನಿಕ ಪ್ರಪಂಚದ ವಿಜ್ಞಾನಗಳ ಪ್ರಸಾರವಾಗಿ ಅವರ ಬಾಳಿನ ಮ ಮೇಲಕ್ಕೇರುವಂತೆ ಮಾಡುವದೇ ಮೈಸೂರು ಪೀಠದ ಸ್ಥಾಪನೆಯ ಮೂಲಗುರಿಯಾಗಿರುವ ಎಂಬುದಾಗಿ ಶ್ರೀಮನ್ಮಹಾರಾಜರು ಆಗ ಘಂಟಾಘೋ ವಾಗಿ ಸಾರಿರುವುದು ಪ್ರಸಿದ್ಧವಾಗಿದೆ. ಮೈಸೂ ವಿದ್ಯಾಪೀಠಕ್ಕೆ ಮೊದಲಿನಿಂದಲೂ ದೊರೆತ "ಕ ರಾಜ್ಯರಮಾರಮಣ"ರ ಮಹತ್ ಪ್ರೋತ್ಸಾ ಫಲವಾಗಿ ಇಂದಿಗೆ ಅದು ಕನ್ನಡ ನಾಡನುಡಿಗಳ ವಿಧದ ಶ್ರೇಯಸ್ಸಿಗೆ ಕಾರಣವಾದ ಏಕಮೇವಾದ್ವಿ ವಿದ್ಯಾಪೀಠವಾಗಿ ಪರಿಣಮಿಸಬಹುದಾಗಿದ್ದಿತು. ಕನ್ನಡ ಜನಾಂಗದ ದುರದೃಷ್ಟದ ಉತ್ಕೃಷ್ಟಮಾದ ಎಂಬಂತೆ ಆ ವಿದ್ಯಾಪೀಠವು ಇಂದಿಗೂ ಬ್ರಿಟಿಷ್ ಪ್ರಾ ಗಳೊಳಗಿನ ಬೇರೆ ವಿದ್ಯಾಪೀಠಗಳ ಮಾದರಿಯ ಕುರುಡುತನದಿಂದ ಹಿಂಬಾಲಿಸಿಸುತ್ತ ನಡೆದು ಕ ಜನಾಂಗದ ಬಹು ಭಾಗವನ್ನು ಅಜ್ಞಾನದ ಕೊಳ ಕೆಡಹುತ್ತ ನಡೆದಿದೆ. ಸ್ವರ್ಗಸ್ಥ ಶ್ರೀಮಾನ್ ಎನ್. ಸುಬ್ಬರಾಯರಂಥವರು ಅದಕ್ಕೆ ಸ್ಥಾನಪತಿಗಳಾಗಿ ಮೈಸೂರು ವಿದ್ಯಾಪೀಠದ ಶಿಕ್ಷಣ ಕ್ರಮವೆಲ್ಲವೂ ಕನ್ನ ಮೂಲಕವಾಗಿ—ಅಂದರೆ ದೇಶಭಾಷೆಯ ಮೂಲಕ ನಡೆಯುವಂತೆ ಮಾಡುವುದಕ್ಕಾಗಿ ಕೈಕೊಳ್ಳ ಆರಂಭದ ಉಪಕ್ರಮಗಳನ್ನು ನಿಷ್ಫಲಗೊಳಿಸುವ ಯನ್ನು ಈ ಕಾಲದ ಮೈಸೂರಿನ ರಾಜ್ಯಾಂಗ ಸೂತ್ರ ಸಂಚಾಲಕರು ತಳೆದಿರುವುದು ಅತ್ಯಂತ ನಿರಾ ಕಾರಣವೂ ಉದ್ವೇಗಕರವೂ ಆಗಿದೆ ಎಂಬುದಕ್ಕೆ

ಸಂದೇಹವಿಲ್ಲ. ವಸ್ತುತಃ ನೋಡಿದರೆ ಕನ್ನಡ ನುಡಿಯು ಸರ್ವಾಧಿಕಾರಸಮನ್ವಿತೆಯಾದ ಸಮ್ರಾಜ್ಞಿಯಂತೆ ಮೆರೆಯಬಹುದಾಗಿದ್ದ ಮೈಸೂರು ರಾಜ್ಯದಲ್ಲಿಯೇ ಈ ಬಗೆಯ ವಿಷಮಯ ವಾತಾವರಣವು ಹಬ್ಬಿಕೊಂಡಿರುವಾಗ ಮಿಕ್ಕ ಕಡೆಯ ಕನ್ನಡ ಜನಾಂಗದ ದುರವಸ್ಥೆಯನ್ನು ಏನೆಂದು ಎಷ್ಟೆಂದು ಬಣ್ಣಿಸಬೇಕು?

ಅತ್ತ ಆಂಧ್ರರು ಮದರಾಸು ವಿದ್ಯಾಪೀಠದ ಹಿಡಿತದೊಳಗಿಂದ ಪಾರಾಗಿ ತಮಗೊಂದು ಸ್ವತಂತ್ರ ವಿದ್ಯಾಪೀಠವನ್ನು ಸ್ಥಾಪಿಸಿಕೊಂಡು ಬಹುವರ್ಷಗಳಾದವು. ಈ ಅವಧಿಯಲ್ಲಿ ಬಳ್ಳಾರಿ ಮೊದಲಾದ ಕನ್ನಡ ಪ್ರದೇಶಗಳನ್ನು ತಮ್ಮ ಕಕ್ಷೆಯೊಳಗೆ ಎಳೆದುಕೊಳ್ಳಲು ಆಂಧ್ರರು ವಿಶ್ವಪ್ರಯತ್ನವನ್ನು ನಡಸಿದರು; ಇನ್ನೂ ನಡಸುತ್ತಲಿದ್ದಾರೆ. ಇತ್ತ ಮುಂಬಯಿ ವಿದ್ಯಾಪೀಠದ ದವಡೆಯೊಳಗಿಂದ ತಪ್ಪಿಸಿಕೊಂಡು ತಮ್ಮ ಭಾಷೆ ಸಂಸ್ಕೃತಿಗಳ ಬೆಳವಣಿಗೆಗೆ ಸ್ವತಂತ್ರವಾಗಿ ಪ್ರಯತ್ನಿಸಲು ಮಹಾರಾಷ್ಟ್ರರು ತಮ್ಮದೊಂದು ವಿದ್ಯಾಪೀಠವನ್ನೇರ್ಪಡಿಸಿಕೊಳ್ಳಲು ಹೆಣಗಾಡಿದುದರ ಫಲವಾಗಿ ಪುಣೆಯಲ್ಲಿ ಅಂಥದೊಂದು ವಿದ್ಯಾಪೀಠವು ಬೇಗನೇ ಹೊರಡುವುದರಲ್ಲಿದೆ. ಮುಂಬಯಿ ಸರಕಾರದವರು ಲಕ್ಷಾಂತರ ರುಪಾಯಿಯ ನೆರವನ್ನು ನೀಡುವ ಆಶ್ವಾಸನವನ್ನು ಈಗಿನ ಯುದ್ಧಮುಕ್ತಾಯದ ಆರ್ಥಿಕ ದುರವಸ್ಥೆಯ ಕಾಲದಲ್ಲಿಯೂ ಮಹಾರಾಷ್ಟ್ರಕ್ಕೆ ಕೊಟ್ಟಿದ್ದಾರೆ. ಈ ಹೊಸ ವಿದ್ಯಾಪೀಠದ ಸ್ಥಾಪನೆಯಾದ ಬಳಿಕ ಉತ್ತರ ಕರ್ನಾಟಕದ ಮಹಾರಾಷ್ಟ್ರರಿಂದಧಿಷ್ಠಿತವಾದ ಸಂಸ್ಥಾನಗಳ ಶಿಕ್ಷಣ ಸಂಸ್ಥೆಗಳ ಪಾಡೇನೆಂಬುದನ್ನು ಈಗ ಹೇಳುವದೇ ಕಠಿಣವಾಗಿದೆ. ಈ ಸಂಸ್ಥಾನಸೀಮೆಗಳನ್ನುಳಿದು ಇತ್ತ ಕಡೆಯ ಬ್ರಿಟಿಷರ ಆಳಿಕೆಯಲ್ಲಿದ್ದ ವಿದ್ಯಾ ಸಂಸ್ಥೆಗಳ ಗತಿಯೇನಾಗಬಹುದೆಂಬುದೂ ತೀವ್ರಪರ್ಯಾಲೋಚನೆಗೆ ಕಾರಣವಾಗಿದೆ. ಕನ್ನಡ ಜನಾಂಗವು ತನಗೊಂದು ಸ್ವತಂತ್ರ ವಿದ್ಯಾಪೀಠವಾಗಬೇಕೆಂದು ಈಗ ಇಪ್ಪತ್ತು ವರ್ಷಗಳಿಂದಲೂ ಹಂಬಲಿಸಿ ಹಾತೊರೆಯುತ್ತಿರುವುದಾದರೂ ಆ ದೆಸೆಯನ್ನು ಕಂಡುಕೊಳ್ಳಲು ಯಾವ ಹುಮ್ಮಸಿನ ಪ್ರಯತ್ನವೂ ಆಗುವದಕ್ಕೆ ಅನುಕೂಲ ಪರಿಸ್ಥಿತಿಯುಂಟಾಗಿಲ್ಲ. ಈಗ ಒಂದೆರಡು ವರ್ಷಗಳಿಂದ ಈ ಪ್ರಯತ್ನಕ್ಕೆ ಮತ್ತೆ ಚಲನೆ ದೊರೆತಂತಾಗಿರುವುದಾದರೂ ಈಗಲೂ ವಿಶೇಷ ಆಶೆಗೆ ಅವಕಾಶವುಂಟಾದ ಲಕ್ಷಣಗಳು ಕಾಣುವದಿಲ್ಲ. ಈ ಬಗೆಯ ಹತಾಶ ಪರಿಸ್ಥಿತಿಯು ಕನ್ನಡ ಜನಾಂಗವನ್ನು ನಾಲ್ಕು ಕಡೆಯಿಂದ ಆವರಿಸಿಕೊಂಡಿರುವುದು ಅನುಭವಕ್ಕೆ ಬರುತ್ತಿರುವುದರಿಂದಲೇ "ಕನ್ನಡ ಜನಾಂಗದ ಜೀವನ ಸಮಸ್ಯೆ" ಎಷ್ಟೊಂದು ತೊಡಕಿನದಾಗಿರುವುದೆಂಬುದು ಸ್ವಯಂ ವೇದ್ಯವಾಗಿ ನಿದರ್ಶನಕ್ಕೆ ಬಾರದಿರದು.

ಈ ತೊಡಕು ಬಿಡುವುದಕ್ಕೆ ಖಂಡಿತವಾಗಿ ಹತ್ತಿಪ್ಪತ್ತು ಕಡೆಗೆ ಹರಿದು ಹಂಚಿ ಹೋಗಿ, ಅನೇಕ ಭಾಷೆಗಳ ಆಡಳಿತಗಳಿಗೆ ಒಳಗಾಗಿರುವ ಕನ್ನಡ ಜನಾಂಗವು ಒಂದಾಗಿ, ಒಂದೇ ಸೂತ್ರ ನಿಬದ್ಧವಾದ ರಾಜ್ಯಾಡಳಿತದಿಂದ, ಅದರ ಪ್ರಾಚೀನ ಅಖಂಡಸ್ವರೂಪವು ಪ್ರಾಪ್ತವಾಗಬೇಕೆಂಬುದೊಂದೇ ಸರ್ವಮಾನ್ಯ ಉಪಾಯವಾಗಿದೆ. ಭಾರತೀಯ ಸ್ವಾತಂತ್ರ್ಯದ ಪ್ರಶ್ನೆಯು ಅಖಂಡ ಭಾರತದ ಸರ್ವಾಂಗಿಕ ಉನ್ನತಿಗೆ ಮೂಲವಾಗಿರುವಂತೆಯೇ ಕರ್ನಾಟಕದ ಏಕೀಕರಣವು— ಏಕಸೂತ್ರನಿಬದ್ಧವಾದ ಪ್ರಾಂತಿಕ ಆಡಳಿತದ ಸರ್ವಾಧಿಕಾರ ಸಮನ್ವಿತವಾದ ಪ್ರಾಂತೀಕರಣವು—ಕನ್ನಡ ಜನಾಂಗದ ಭವಿತವ್ಯವನ್ನು ನಿರ್ಣಯಿಸುವುದಕ್ಕೆ ಪ್ರತಿಮಾತಿಲ್ಲದೊಂದೇ ಮೂಲವಾಗಿರುವುದೆಂಬುದನ್ನು ಕನ್ನಡ ಜನಾಂಗವು ಈಗ ೩೦–೪೦ ವರ್ಷಗಳಿಂದ ಪೂರಾ ಮನಗಂಡಿದೆ. ಇದನ್ನು ಕಾರ್ಯತಃ ಸಾಧಿಸುವುದಕ್ಕೆ ತಕ್ಕ ಮಟ್ಟಿಗಿನ ಪ್ರಯತ್ನವೂ ನಡೆದೇ ಇದೆ. ಆದರೆ ಕನ್ನಡ ಜನಾಂಗದ ವಿದ್ಯಮಾನ ಸ್ಥಿತಿಯಲ್ಲಿ ಆ ಪ್ರಯತ್ನಕ್ಕೆ ಸಾಕಷ್ಟು ಶಕ್ತಿ ಸಾಮರ್ಥ್ಯಗಳು ಆಂತರಿಕ ಸ್ಫೂರ್ತಿಯಿಂದ ಒದಗಬೇಕಾದಷ್ಟು ಒದಗಿ ಬರುತ್ತಿರುವುದಿಲ್ಲವೆಂಬುದೇ ಅನುಕಂಪನೀಯವಾದ ಸಂಗತಿ. ಇಡೀ ಜನಾಂಗವೇ ತನ್ನ ಗುರಿಯನ್ನು ಸಾಧಿಸಲು ಹುರಿಗೊಂಡು ಹಾತೊರೆದು, ಎದುರಿಸಬಹುದಾದ ಎಡರುಗಳನ್ನು ಮೆಟ್ಟಿ ಮುಂದುವರಿಯುವ ಸಾಹಸವನ್ನು ಕೈಕೊಳ್ಳುವುದಾದರೆ ಯಾವ ಬಾಹ್ಯಶಕ್ತಿಯೂ ಅದನ್ನು ತಡೆಗಟ್ಟಲಾರದು. ಈಗಾಗಲೇ ಗೋಚರವಾಗುತ್ತಲಿರುವ ಭಾರತೀಯ ಸ್ವಾತಂತ್ರ್ಯದ ಜೊತೆಯಲ್ಲಿಯೇ ಕನ್ನಡ ಜನಾಂಗವು ತನ್ನ ಜೀವನ ಮರಣದ ಸಮಸ್ಯೆಯನ್ನು ಬಿಡಿಸಿಕೊಳ್ಳಲು ಹೆಣಗಬೇಕಾಗಿದೆ. ಈ ಹೊತ್ತು ಮೀರಿದರೆ ಮುಂದೆ ಕನ್ನಡಿಗರಿಗೆ ಚಿರಕಾಲಿಕ ಅಂಧ

ತಮಸ್ಸಿನ ಹೊರತು ಬೇರೆಯಾವ ಗತಿಯೂ ಕಾಣು ವಂತಿಲ್ಲವೆಂಬುದು ಕಟ್ಟಕಟ್ಟಮಾತು. ಆದುದರಿಂದ ಇಂಥ ಸುಸಂಧಿಕಾಲದಲ್ಲಿ ಕನ್ನಡ ಜನಾಂಗದ ಉಜ್ವಲ ಭವಿತ ವ್ಯದ ಕನಸನ್ನು ಇಷ್ಟುದಿವಸ ಕಾಣುತ್ತಿದ್ದ ಅಂತಃಕರಣ ಗಳೆಲ್ಲ ತಮ್ಮ ಆ ಕನಸು ನನಸಾಗುವಂತೆ ಭಗೀರಥ ಪ್ರಯತ್ನಮಾಡಲು ಸನ್ನದ್ಧವಾಗಿ ಮುಂದಾಗಬೇಕಾಗಿದೆ. ರಾಜಕೀಯ ಸರ್ವಾಧಿಕಾರ ಸಮನ್ವಿತ ಪ್ರಾಂತೀಕರಣ ವೊಂದು ಸಾಧಿಸಿದರೆ ಉದ್ಯೋಗ ವ್ಯವಹಾರ ಶಿಕ್ಷಣ ಆರ್ಥಿಕ ರಕ್ಷಣೆ ಮೊದಲಾದ ವಿಷಯಗಳೆಲ್ಲ ಸುಲಭ ವಾಗಿಯೇ ಬಿಡುವುದಕ್ಕೆ ಆಸ್ಪದವಾಗುವುದೆಂಬುದನ್ನು ಮನದಂದು ಪ್ರತಿಯೊಂದು ಪ್ರದೇಶದ ಪ್ರತಿಯೊಬ್ಬ ಕನ್ನಡಿಗನೂ ಈ ಮಹತ್ಕಾರ್ಯದಲ್ಲಿ ಅಸಿಬಿಸಿ ಇಲ್ಲದೆ ದುಡಿಯಲು ಹಿಂದೆ ಮುಂದೆ ನೋಡಬಾರದೆಂಬುದೇ ಬಿಚ್ಚು ಮಾತಿನ ಬೇಡಿಕೆಯಾಗಿದೆ. ಕನ್ನಡ ಜನಾಂಗದ ಜೀವನ ಸಮಸ್ಯೆಯೇ ಅಡಕವಾಗಿರುವ ಈ ಸಂದರ್ಭ ದಲ್ಲಿ ಈ ಬೇಡಿಕೆಯೆಂಬುದು ಹೆಚ್ಚಿನ ಬೇಡಿಕೆಯಾಗ ಲಾರದಷ್ಟೇ?

ಮುದವೀಡು ಕೃಷ್ಣರಾಯ

## ಎಚ್ಚರಿಕೆ !

ನೃಪತುಂಗ ಚಾಳುಕ್ಯ ರಾಷ್ಟ್ರಕೂಟರ ತೋರಿ
ನಮ್ಮ ಕನ್ನಡನಾಡ ಸಿರಿಯ ನೆನೆವುದು ಸಾಕು
ಅಂದಿನದು ಅಂದಿಗದು, ಹಳೆದಾಯ್ತು ಇಂದಿಗದು
ಮುಂದಿನದ ಕನ್ನಡದ ನಾಡಿನಾ ಗತಿಯೇನು? ॥ ೧ ॥

ನಾಡೋಜ ಪಂಪಾದಿ ಕವಿಕಾವ್ಯಗಳನೋದಿ
ತಲೆದೂಗಿ ಮೈಮರೆದು ಮಲಗುವುದು ಸಾಕು
ಕಣ್ದೆರೆದುನೋಡಿರೈ ಕಾಲವಿದು ಬದಲಾಯ್ತು
ಪರರಾಕ್ರಮದಿ ನಾಡನುಳಿಸುವ ಬಗೆಯೆಂತು? ॥ ೨ ॥

ಅಂತಿತ್ತು ನಮ್ಮ ನಾಡು ಇಂತಿತ್ತು ನಮ್ಮ ನುಡಿ
ಎಂದೆನುತೆ ಗತಿಗೋಷ್ಠಿ ನೆನೆದೆಮ್ಮ ಮತಿಹೋಯ್ತು
ಮತಿಯುಳ್ಳ ಸೋದರರ ಬೆದರಿಕೆಯು ಬಲುಹಾಯ್ತು
ಗತಿಕಾಣದಾವಿಂದು ಬಾಯ್ಬಿಡುವ ಪರಿಯಾಯ್ತು ॥

ಕಲ್ಲು ಕಬ್ಬಿಣ ಕೋಟೆ ಕಾಯಲಾರವು ಎನಲು
ನಿಲ್ಲುವವೆ ಮಾತಿನ ಕೋಟೆಗಳು ತಾವಿಂದು
ಇಲ್ಲಿಲ್ಲ ಸೋದರರೆ! ಬಾಂಬಿನ ಯುಗವಿಂದು
ಎಲ್ಲೆಯನು ರಕ್ಷಿಸುವ ಕ್ರಮವೆ ತಾ ಬೇರಿಂದು ॥ ೪ ॥

ಅಂದಿನವರಿಂದಿಲ್ಲ ಇಂದಿಹರು ಮುಂದಿಲ್ಲ
ಅಂದಂದಿಗವರವರೆ ನಾಡನುಳಿಸಿದರೆಲ್ಲ
ಇಂದಿನದು ನಮ್ಮ ಹೊಣೆ ಬನ್ನಿ ಸಮಯವದಿಲ್ಲ
ಅಂದು ಮುಂದಿನಗೊಡವೆ ಬೇಡಿಂದು ಬರಿದೆಲ್ಲ ॥ ೫ ॥

ಹೇಳುವುದು ಬೇಡಿನ್ನು ಕೇಳುವುದು ಸಾಕಿನ್ನು
ಕಳೆದ ನಾಡಿನ ರಚನೆ ಗೈಯ್ಯಬೇಕಾವಿನ್ನು
ಕಾಳರಾತ್ರಿಯುಕಳೆದು ಬೆಳಗಾಯ್ತು ಏಳಿನ್ನು
ಚೆಲುವ ಕನ್ನಡನಾಡ ತೇಜವಂ ಬೆಳಗಿನ್ನು ॥ ೬ ॥

ಶೌರ್ಯದಿಂ ಕನ್ನಡದ ಹಿರಿಮೆಯಂ ಜಗಕೆತ್ತಿ
ವೀರತ್ವಮಂತೋರಿ ಮೆರೆಯಿಸಲುಬೇಕಿಂದು
ಧೈರ್ಯದೆದೆಯಿಂದೆಲ್ಲ ಬನ್ನಿರೈ ನೀವಿಂದು
ಕಾರ್ಯಕಂಕಣಕಟ್ಟ ಕರುನಾಡ ರಕ್ಷಿಸಿರಿ ॥ ೭ ॥

ಕೆ. ದೊಡ್ಡನಗೌಡ
ಜೋಳದರಾಶಿ

# ಹೆಣ್ಣಿನ ಹೆಚ್ಚಳ!

ಹೆಣ್ಣಿನ ಹೆಚ್ಚಳ ನಮ್ಮ ಭಾರತದಲ್ಲಿ ಎಂತಹ ಕಾರ್ಯದಲ್ಲಿದೆ? ಎಂತಹ ಕಾರ್ಯದಲ್ಲಿಲ್ಲ ಎಂದು ಆಲೋಚಿಸಿ ತಲೆ ಕೆಡಿಸಿಕೊಳ್ಳುವುದೇ ಬೇಡ! ವೇದ, ಪುರಾಣ, ಇತಿಹಾಸ ಇವುಗಳ ಕಾಲಗಳಲ್ಲೆಲ್ಲ ಹೆಣ್ಣು ತನ್ನ ಹೆಚ್ಚಳವನ್ನು ಘಂಟಾಘೋಷವಾಗಿ ಸಾರುತ್ತಲೇ ಬಂದಿದೆ. ಆ ಹೆಚ್ಚಳ ಹಗಲಿನಲ್ಲಿ ಸೂರ್ಯನಂತೆಯೂ, ಇರುಳಿನಲ್ಲಿ ತಿಮಿರದಂತೆಯೂ ಎಲ್ಲೆಲ್ಲಿಯೂ ಮೂಡಿ ಮೂರ್ತಿಗೊಂಡಿದೆ. ಇಂತಹ ಹೆಚ್ಚಳಕ್ಕೆ ಪುರುಷನ ಗೌರವವೋ ಅಥವಾ ಸ್ವಾರ್ಥವೋ ತನ್ನ ಸ್ಥಾನಕ್ಕೆ ಧಕ್ಕೆಯಾಗಬಾರದೆಂಬ ಧ್ಯೇಯದಿಂದ ಬಣ್ಣ ಬಳಿದುಕೊಳ್ಳಲು ಹವಣಿಸಿ ಹೆಣ್ಣಿಗೆ, 'ಅಬಲೆ' ಎಂಬ ಸನ್ಮಾನವನ್ನು ಸಂಪ್ರದಾಯದಿಂದ ಸಲಿಸುತ್ತಾ ಬಂದಿದೆ. ಪುರುಷನ ಸ್ವಾರ್ಥವು ದಯಪಾಲಿಸಿದ ಈ 'ಅಬಲೆ' ಎನ್ನುವ ಬಿರುದಿನ ಚಕ್ರಾಧಿಪತ್ಯದ ನೆರಳಿನಲ್ಲಿ ತಣ್ಣಗೆ ಬಾಳಲು ಸ್ತ್ರೀ ಶಕ್ತಿಗೆ ಸಹನವಿಲ್ಲ. ಎಂತಲೆ ಕಾಲಕಾಲದಲ್ಲಿ, ಅತ್ಯಾವಶ್ಯಕವೆನಿಸಿದಾಗ ತನ್ನ ಅಮೌಲ್ಯವಾದ ಜ್ಯೋತಿಯಂತಹ ಆತ್ಮಬಲವನ್ನು ಜ್ವಾಲೆಯಂತೆ ಪ್ರಜ್ವಲಿಸಿ 'ಅಬಲೆ' ಎಂಬ ಶಬ್ದವನ್ನು 'ಭಲೆ' ಎನ್ನುವಂತೆ ಬಿತ್ತರಿಸಿಕೊಂಡಿದೆ ಹೆಣ್ಣು. ಸುತ್ತಲೂ ಹಸುರಿಡಿದ ಪಾಜಿ ಇದ್ದರೇನೆ ವಿಕಸಿಸುವ ಕಮಲಕ್ಕೊಂದು ಶೋಭೆ. ಗುಲಾಬಿಯ ಬೆಲೆ ಎಷ್ಟೆಂಬುದನ್ನು ಆ ಗಿಡಕ್ಕಿರುವ ಮುಳ್ಳುಗಳೇ ಹೇಳುತ್ತಿರುವಂತೆ, ಅಬಲೆ ಎಂಬ ಬಿರುದು ಸಹ ಹೆಣ್ಣಿನ ಹೆಚ್ಚಳಕ್ಕೊಂದು ಶೋಭೆ. ಬೆಲೆ ಹೆಚ್ಚಿಸುವ ಬೇಲಿ.

ಹೆಣ್ಣು ತನ್ನ ಸಾಮರ್ಥ್ಯವನ್ನು ಸಾಧಿಸಿಕೊಂಡುದು ಹೇಗೆ, ಎಂತಹ ಸಂದರ್ಭದಲ್ಲಿ ಎಂದು ಪರಿಶೀಲಿಸಿ ನೋಡಿದರೆ, ಪುರುಷನು—ಹೂಂ! ಪುರುಷನೊಂದೇ ಏಕೆ, ಪುರುಷೋತ್ತಮನು ಸಹ—ನಾಚಬೇಕಾದೀತು.

ಭಾರತೀಯರಾದ ನಮಗೆ ಭವ್ಯವಾದ ಎರಡು ಹಬ್ಬಗಳಿವೆಯಲ್ಲಾ ಅವು ಯಾರ ಶೌರ್ಯದ ಕುರುಹುಗಳು? ಮೂವತ್ತುಮೂರು ಕೋಟಿ ದೇವತೆಗಳಿಗೆ ಸಾಧ್ಯವಾಗದೆ ಹೋದ ರಾಕ್ಷಸರ ವಧೆಯನ್ನು ಕೇವಲ ಒಬ್ಬ ದೇವಿ ಕೊನೆಗಾಣಿಸಿದ ಸಾಕ್ಷಿಯಲ್ಲವೆ ವಿಜಯದಶಮಿ? ನಾರಾಯಣನಿಗೆ ಕೈ ತೋರಿದ ನರಕಾಸುರನ ವಧೆಯು ನಾರಿಯಾದ ಸತ್ಯಭಾಮೆಯಿಂದ ಮುಗಿಯಿತು ಎನ್ನುವ ಜಯಭೇರಿಯಲ್ಲವೆ ದೀಪಾವಳಿ? ಅಂದಿನಿಂದಲೇ ಇರಬೇಕು ತಾವು ಉಳಿದುಕೊಂಡ ಉಪಕಾರಕ್ಕೆ ತಮ್ಮ ಹೆಸರುಗಳಿಗೆ ಮೊದಲು ಸ್ತ್ರೀ ರೂಪದ ಹೆಸರುಗಳನ್ನು ತಳಿಕೆಹಾಕಿಕೊಂಡು ಉಮಾಪತಿ, ಗೌರೀಶಂಕರ, ರಮಾರಮಣ, ಲಕ್ಷ್ಮೀನಾರಾಯಣ ಮುಂತಾದ ಹೆಸರುಗಳನ್ನು ಧರಿಸಿ ಅಬಲತ್ವಕ್ಕೆ ಮುಡುಪನ್ನು ಅರ್ಪಿಸಿರಬಹುದು ಶಂಕರ, ನಾರಾಯಣರು. ಎಂತಲೆ ಶಂಭು ಮುತ್ತು, ಮಾಸೆ ಎರಡನ್ನೂ ಹೊತ್ತುನಿಂತ. ನಾರಾಯಣ ಅದಕ್ಕೂ ಒಂದು ಹೆಜ್ಜೆ ಮುಂದೆಹೋಗಿ ಮೋಹಿನಿಯೇ ಆದ. ಇರಲಿ.

ದೇವತೆಗಳ ಅಮರತ್ವಕ್ಕೆ ಲೋಪಾಮುದ್ರೆಯ ಪ್ರಭಾವವೇ ಕಾರಣವೆಂದು ಪುರಾಣದ ಕೇಕೆ ಕೇಳುತ್ತಿಲ್ಲವೆ? ಆ ಕೇಳಬರುತ್ತಿರುವ ಧ್ವನಿಯಲ್ಲಿ ಹೆಣ್ಣಿನ ಹೆಚ್ಚಳವನ್ನು ಲಾಲಿಸಿ ಕೇಳುವುದಾದರೆ ಆಶ್ಚರ್ಯದ ಪರಮಾವಧಿಯನ್ನೇ ಹೊಂದಬೇಕಾದೀತು.

"ಜೋ ಲಾಲೀ!" ಎಂದು ಜೋಗುಳ ಹೇಳುತ್ತಾ ತ್ರಿಮೂರ್ತಿಗಳನ್ನು ತೊಡೆಯಮೇಲೆ ಆಡಿಸಿದ ಅನಸೂಯಾ; "ಕಬ್ಬದಾರ್! ಹುಟ್ಟಿಗಿಟ್ಟಿಯಾ ಜೋಕೆ!" ಎಂದು ಭಾಸ್ಕರನಿಗೆ ಬೆದರುಹಾಕಿ ಗಪ್‌ಚುಪ್ ಮಾಡಿದ ಅನಲಾಯಿ; "ನೀನು, ಎಲ್ಲಿಗೆ ಹೋಗುತ್ತಿಯೋ ಹೋಗು ನೋಡುತ್ತೇನೆ!" ಎಂದು ದಂಡಧರನನ್ನೇ ಹಿಂಬಾಲಿಸಿ, ಆತನನ್ನು ದಣಿಸಿ ಗಂಡನ ಪ್ರಾಣವನ್ನು ಪಡೆದ ಸಾವಿತ್ರಿ—ಇವರೆಲ್ಲರೂ ದೇವತೆಗಳನ್ನೇ ಆಡಿಸಿ, ಬೆದರಿಸಿ, ಬೆರಗುಗೊಳಿಸಿದ ಹೆಚ್ಚಿನ ಹೆಚ್ಚಳವನ್ನು ಸಪ್ತಸಾಗರದಷ್ಟೇ ವಿಶಾಲಮಾಡಿದ ಆಣಿಮುತ್ತು ಹವಳಗಳಲ್ಲವೆ?

"ಇದು ಹೀಗಲ್ಲ ಹೀಗೆ!" ಎಂದು ಯಾಜ್ಞವಲ್ಕ್ಯರ ಕೂಡ ವಾದಿಸಿದ ಗಾರ್ಗಿ, "ಬುದ್ಧಿಗೆ ಬೆಲೆ ಇರಲಿ!" ಎಂದು ಪ್ರಚಂಡ ಪ್ರಜ್ಞಾಶಾಲಿಗಳಾದ ಶಂಕರಾಚಾರ್ಯರು ಸ್ಥಾಪಿಸಿದ ಮಠಗಳಲ್ಲಿ ಶಾರದೆಯರೂಪದಿಂದ ಪೂಜೆಗೊಳ್ಳುತ್ತಿರುವ ಉಭಯಭಾರತಿ, "ಹೌದವ್ವ ಹೌದೆ" ಎಂಬ ಶಹಭಾಸನ್ನು ವಚನ ಸಾಹಿತ್ಯದಲ್ಲಿ ಪಡೆದ ಮಹಾದೇವಿ ಅಕ್ಕ, "ಪೂರಾಕಹೇ ಪ್ರಭು" ಎಂಬ ಹಾಡುಗಳನ್ನು ಮನೆಮನೆಯಲ್ಲಿ ಕೇಳುವಂತೆ ಮಾಡಿದ ಮೀರಾ, ಅಭಿನವ ಪಂಪನನ್ನು ಕಂಪ ಹಿಡಿಸಿದ ಕಂತಿ, ಹೆಣ್ಣೆಂದು ಬೀಳ್ಗಳೆದವರನ್ನು ಹೆಡ್ಡರನ್ನಾಗಿ ಮಾಡಿದ ಸಂಚಿಯ ಹೊನ್ನಮ್ಮ—ಇವರೆಲ್ಲರೂ ಪ್ರತಿಭಾ ಪ್ರಪಂಚದಲ್ಲಿ ಹೆಣ್ಣಿನ ಹೆಚ್ಚಳವನ್ನು ಪ್ರಕಾಶಿಸುವಂತೆ ಮಾಡಿದ ಜ್ಯೋತಿಗಳಲ್ಲವೆ?

ತನ್ನ ದೇಶದಲ್ಲೊಂದೇ ಅಲ್ಲದೆ ಬೇರೆ ಕಡೆಯಲ್ಲೆಲ್ಲಾ ಮತಪ್ರಚಾರ ಮಾಡಲೋಸುಗ ಚಕ್ರವರ್ತಿಯ ಮಗಳೆಂಬುದನ್ನು ಮರೆತು ಭಿಕ್ಷುಕಿಯಾಗಿ ಹೊರಟ ಅಶೋಕನ ಮಗಳು ಸಂಗಮಿತ್ರೆ, ಮಲ್ಲಿಕಾರ್ಜುನನ ಸಾಕ್ಷಾತ್ಕಾರಕ್ಕೆ ಹಂಬಲಿಸಿ ಕೌಶಿಕನ ಅರಮನೆಯ ವೈಭವವನ್ನು ತೊರೆದ ಮಹಾದೇವಿ ಅಕ್ಕ, ಕೃಷ್ಣನ ಕೃಪಾಕಟಾಕ್ಷಕ್ಕೆ ಒಳಗಾದ ಕುಂಬನ ರಾಣಿ ಮೀರಾ—ಇವರೆಲ್ಲರೂ ವೈರಾಗ್ಯದ ಮಂಡಲದಲ್ಲಿ ಹೆಣ್ಣಿನ ಹೆಚ್ಚಳವನ್ನು ನಿಚ್ಚಳವಾಗಿ ಮಿನುಗಿಸಿದ ತಾರಾಗಣಗಳಲ್ಲವೆ?

ಕೈಯ ಖಡ್ಗವನ್ನು ಝಳಪಿಸುತ್ತಾ 'ನಾನು' ಎಂದ ಧೀರರನ್ನು, ಅರಸ ಬಾದಶಹರನ್ನು ಬೆರಗುಗೊಳಿಸಿದ ಝಾನ್ಸಿ ಲಕ್ಷ್ಮೀಬಾಯಿ, ರಾಣಿ ದುರ್ಗಾದೇವಿ, ಚಾಂದಬೀಬಿ, ಚೆನ್ನಮ್ಮ, ಮಲ್ಲಮ್ಮ ಇವರೆಲ್ಲರೂ ವೀರಶ್ರೀಯಿಂದ ಹೆಣ್ಣಿನ ಹೆಗ್ಗಳಿಕೆಯನ್ನು ಉಕ್ಕಿಸಿದ ವೀರರತ್ನಗಳಲ್ಲವೆ? ದುಃಖದಿಂದ ಮೈಮರೆತ ತಂದೆಗೆ ರಾಣಾವಿನ ವಂಶ ಎಂದೂ ಕಳಂಕ ಕಾಣಕೂಡದೆಂದು ಅಪೂರ್ವ ಆತ್ಮಾಭಿಮಾನವನ್ನು ತುಂಬಿ ಚಿರನಿದ್ರೆಯನ್ನು ಹೊಂದಿತು ಪ್ರತಾಪನ ಹತ್ತು ವರ್ಷದ ಹೆಣ್ಣು ಮಗು. ಜೀವಗಳ್ಳನಾಗಿ ರಣದಿಂದ ಮರಳಿಬಂದ ಪತಿಗೆ ಅಸದಳವಾದ ದೇಶಾಭಿಮಾನವನ್ನು ಬೋಧಿಸಿ ತಿರುಗಿ ರಣಕ್ಕಟ್ಟಿದಳು ರಜಪೂತರಮಣಿ. ತನ್ನನ್ನು ಕೆಣಕಿದವನಿಗೆ ಮಣ್ಣನ್ನು ಮುಕ್ಕಿಸಿದಳು ಪದ್ಮಿನಿ. ಶಿಷ್ಟಪಾಲನೆ ದುಷ್ಟ ಶಿಕ್ಷಣೆ ಆಗಬೇಕೆನ್ನುವ ಹೇತುವನ್ನು ಪೂರ್ಣಮಾಡಿಕೊಳ್ಳಲೋಸುಗ ಪುತ್ರನಿಗೆ ಲಾಲಿಹಾಡುತ್ತಲೆ ರಣೋತ್ಸವ ತುಂಬಿ ಅಸಮಬಲವನ್ನಾಗಿಮಾಡಿದಳು ಮಾತೆ ಜೀಜಾ. ದೇಶಾಭಿಮಾನಕ್ಕಾಗಿ, ಆತ್ಮಾಭಿಮಾನಕ್ಕಾಗಿ ಪ್ರಾಣವನ್ನು ಅಣುವಾಗಿ ಕಂಡು ಅಜೇಯವಾದ ಆತ್ಮಾರ್ಪಣೆಯನ್ನು ಸಲ್ಲಿಸಿ 'ಜೋಹೋರ್' ಎಂಬ ಶಬ್ದವನ್ನು ಅಮರತ್ವಕ್ಕೆ ಅರ್ಪಿಸಿದರು ಅದೆಷ್ಟೋ ರಮಣಿಯರು. ಇವರೆಲ್ಲರೂ ನಿದ್ದೆಗಣ್ಣಿನಲ್ಲಿರುವವರಿಗೆ ದಾರಿತೋರಿದ ದೀವಟಿಗೆಗಳಲ್ಲವೆ? ಗಂಧದ ಕೊರಡಿನಂತೆ ತಮ್ಮ ದೇಹವನ್ನು ದೇಶದ ಸ್ವಾತಂತ್ರ್ಯಕ್ಕಾಗಿ ಹಗಲು, ಇರುಳು ತೇದು ತೇದು 'ದೇಶಕ್ಕಾಗಿಯೇ ದೇಹ'ವೆಂಬ ಮಹಾ ಮಂತ್ರವನ್ನು ದೇಶಬಾಂಧವರಿಗುಸುರಿ ಸ್ವರ್ಗದ ಸೋಪಾನವನ್ನೇರಿದ ಅನಿಬಿಸಂಟ್, ಕಸ್ತೂರಿಬಾ, ಕಮಲಾನೆಹರು, ಸತ್ಯವತಿದೇವಿ ಇವರೆಲ್ಲರೂ ಅಹಿಂಸೆಯ ಕತ್ತಿ ಹಿಡಿದ ಸ್ವಾತಂತ್ರ್ಯ ಸಮರದಲ್ಲಿ ಹೆಣ್ಣಿನ ಆಧಿಕ್ಯವನ್ನು ಆಚಂದ್ರಾರ್ಕವಾಗಿ ಅಚ್ಚಳಿಯದಂತೆ ನಿಲ್ಲಿಸಿದ ಶಿಲಾ ಶಾಸನಗಳಲ್ಲವೆ? ಈ ಹೆಚ್ಚಳಿಕೆಗಳನ್ನೆಲ್ಲಾ ತುಲಾಭಾರಮಾಡಿ ನೋಡಬೇಕಾದರೆ ಇಂದ್ರನ ವೈಭವ ಖಾಲಿಯಾಗಿ ತ್ರಿಮೂರ್ತಿಗಳ ಬಂಡವಾಲ ಬರಿದಾಗಬೇಕಾದೀತು.

ಇಂತಹ ಅಮೌಲ್ಯವಾದ ಹೆಚ್ಚಳವನ್ನು ಕಂಡುಕೊಂಡೇ "ತೊಟ್ಟಿಲು ತೂಗಿದ ಕೈ ತಿರೆಯನ್ನಾಳುವುದು" ಎಂದನು ಒಬ್ಬ ಪರಿಶೀಲಕನು. "ಹೆಣ್ಣಿಂದ ಇಹ ಉಂಟು ಹೆಣ್ಣಿಂದ ಪರ ಉಂಟು ಹೆಣ್ಣಿಂದ ಸಕಲ ಸಿರಿ ಉಂಟು" ಎಂದನು ಹೆಣ್ಣಿನ ಹೆಗ್ಗಳಿಕೆಯನ್ನು ತನ್ನ ತ್ರಿಪದಿಯಿಂದ ತೂರಿದ ಸರ್ವಜ್ಞನು. "ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು; ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು; ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು; ಹೆಣ್ಣು ಹೆಣ್ಣಲ್ಲ ಹೆಣ್ಣು ರಕ್ಕಸಿ ಅಲ್ಲ ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂದರು ಹೆಣ್ಣಿನ ಯೋಗ್ಯತೆಯನ್ನು ತನ್ನ ಇಷ್ಟ ದೇವರಿಗೆ ಹೋಲಿಸಿದ ಸಿದ್ಧರಾಮೇಶ್ವರರು. "ಸ್ತ್ರೀಯನ್ನು ಗೌರವಿಸಿದ ಸ್ಥಳದಲ್ಲಿ ದೇವತೆಗಳ ವಾಸ" ಎಂದನು ಮನು. "ಸ್ತ್ರೀಯರು ಕಾಳಿಯ ಅವತಾರ" ಎಂದರು ರಾಮಕೃಷ್ಣ ಪರಮಹಂಸರು. "ಸ್ತ್ರೀ ಪವಿತ್ರಮೂರ್ತಿ" ಎಂದರು ಮಹಾತ್ಮಾ ಗಾಂಧಿಯವರು. ಈ ಮಹನೀಯರೆಲ್ಲರೂ ಮುಕ್ತಕಂಠದಿಂದ ಅಬಲತ್ವವನ್ನೆ 'ಭಲೆ' ಎಂದು ಮನ್ನಿಸಿದ್ದಾರೆ. ಇಂತಹ ಅಬಲತ್ವವು ಯಾರಿಗೆ ಬೇಡ? ಪುರುಷನು ಕೇಳಿಕೊಂಡರೂ ಬಂದೀತೆ!

ಅಬಲತ್ವದಲ್ಲಡಗಿರುವ ಹೆಣ್ಣಿನ ಸ್ವಶಕ್ತಿಯ ಫ್ಯೂಜಿಯಾಮವು (Fujiyama) ಸ್ಫೋಟಗೊಂಡಲ್ಲಿ ದೇಶಕ್ಕೂ, ನಾಡಿಗೂ ಅದೆಷ್ಟೋ ಮಹಾತ್ಮರನ್ನು ಪ್ರಸಾದಿಸೀತು. ಚಾಣಕ್ಯ ವಿದ್ಯಾರಣ್ಯರನ್ನು ಒದಗಿಸೀತು. ಪುಲಿಕೇಶಿ, ಪ್ರತಾಪರನ್ನು, ಹಕ್ಕಬುಕ್ಕರನ್ನು ಅರ್ಪಿಸೀತು. ಮೂರು ಘಳಿಗೆ ಸುರಿದ ಹೊನ್ನಿನ ವರ್ಷವನ್ನು ಮೂರು ದಿನ ಸುರಿಯುವಂತೆ ಭುವನೇಶ್ವರಿಯನ್ನೇ ಬಡಿದೆಬ್ಬಿಸೀತು. ಇಂದಿಲ್ಲ ನಾಳೆ ಇದು ಆಗಲೇಬೇಕು. ಆಗಿಯೇ ಆಗುತ್ತದೆ.

ತೊಗರಿ ಸರ್ವಮಂಗಳಾಂಬ, ಬಳ್ಳಾರಿ

# ಯಕ್ಷಗಾನ

ಕನ್ನಡ ಸಾಹಿತ್ಯವಾಹಿನಿಯನ್ನು ತುಂಬಿ, ಕನ್ನಡನಾಡಿನ ಸಂಸ್ಕೃತಿಯನ್ನು ವರ್ಧಿಸಿ, ತನ್ನ ಸ್ವಾತಂತ್ರ್ಯವನ್ನುಳಿಸಿಕೊಂಡು ಮುಂಬರಿಯುವುದರಲ್ಲಿ ಯಕ್ಷಗಾನ ಹಿಂದುಳಿದಿಲ್ಲ. ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿ ಪ್ರಯೋಗ ಪ್ರಚಾರಗಳಲ್ಲಿದ್ದು, ಜಾನಪದ ಸಾಹಿತ್ಯವಾಗಿ ಉಳಿದ ಈ ಯಕ್ಷಗಾನಕ್ಕೆ ಇಂದು ಯಾವ ಸ್ಥಾನ ಮಾನಗಳಿವೆ, ಇದರ ವೈಶಿಷ್ಟ್ಯವೇನು ಎಂದು ಸರಿಯಾಗಿ ಸಾಂಗವಾಗಿ ಬರೆದವರು ಈವರೆಗೆ ಇಲ್ಲವೆಂದರೂ ಹೆಚ್ಚಲ್ಲ. ಇದರಿಂದ ಕನ್ನಡ ಸಾಹಿತ್ಯ ವಿದ್ವಾಂಸರನೇಕರು ಇದನ್ನು ದುರ್ಲಕ್ಷಿಸಿ ಅಥವಾ ನಿರ್ಲಕ್ಷಿಸಿಕೊಂಡಿದ್ದಾರೆ. ಕನ್ನಡ ಕವಿಚರಿತೆಯನ್ನವಲೋಕಿಸುವಾಗ ಅಲ್ಲಲ್ಲಿ ಕೆಲವು ಕವಿಗಳನ್ನು ಯಕ್ಷಗಾನ ಕವಿಗಳೆಂದೂ ಕೆಲವರ ಕೃತಿಗಳನ್ನು ಯಕ್ಷಗಾನ ಪ್ರಬಂಧಗಳೆಂದೂ ಬರೆದುದು ಕಂಡು ಬರುತ್ತಿದೆ.

ಇತ್ತೀಚೆಗೆ ನಾನು ಕಂಡ ಲೇಖನಗಳಲ್ಲಿ ಶ್ರೀ ಕವಿಭೂಷಣ ಕೆ. ಪಿ. ವೆಂಕಪ್ಪಶೆಟ್ಟರು ತಮ್ಮ 'ರಾಣಾ ರಾಜಸಿಂಹ' ಎಂಬ ಯಕ್ಷಗಾನ ಪ್ರಬಂಧದ 'ಯಕ್ಷಗಾನ ಪರಿಚಯ' ದಲ್ಲಿ "ನೃಪತುಂಗನು ನಾಡುಗಬ್ಬದ ಭೇದಗಳನ್ನು ಹೇಳುವಾಗ್ಗೆ ಚತ್ತಾಣ ಅಥವಾ ಜತ್ತಾಣ ಎಂದೂ ಬೆದಂಡೆ ಎಂದೂ ಎರಡು ಭೇದಗಳನ್ನು ಕಲ್ಪಿಸಿರುವನು. ಈ ಚತ್ತಾಣ ಜತ್ತಾಣಗಳೇ ಜಕ್ಕತಾಣ, ಜಕ್ಕಗಾನ ಎಂದು ಸಂಕುಚಿತ ರೂಪಗಳನ್ನು ಹೊಂದಿರಬಹುದೇ?" ಎಂದು ತಮ್ಮ ಸಂದೇಹವನ್ನು ಮುಂದಿಟ್ಟಿದ್ದಾರೆ. ಬಹುಶಃ ಇದನ್ನವಲಂಬಿಸಿಯೋ ಎಂಬಂತೆ ಶ್ರೀ ಎಂ. ಆರ್. ಶಾಸ್ತ್ರಿಗಳು ತಮ್ಮದೊಂದು ಲೇಖನದಲ್ಲಿ ಚತ್ತಾಣವೆಂಬುದೇ ಯಕ್ಷಗಾನವಾಗಿರಬೇಕೆಂದು ಸಾಧಿಸಿದ್ದಾರೆ. ಕವಿರಾಜಮಾರ್ಗದಲ್ಲಿ ಚತ್ತಾಣದ ಲಕ್ಷಣವು ಈ ರೀತಿಯಿದೆ:

> ಕಂದಂಗಳ್ ಪಲವಾಗಿರೆ
> ಸುಂದರ ವೃತ್ತಂಗಳಕ್ಕರಂ ಚೌಪದಿ ಮ
> ತ್ತಂದಲ್ ಗೀತಿಕೆ ತಿವದಿಗ
> ಳಂದಂ ಬೆತ್ತೆಸೆಯೆ ಪೇಳ್ದೊಡದು ಚತ್ತಾಣಂ

ಇದರ ಪ್ರಕಾರ ಇದು ಕನ್ನಡದ ಛಂದಸ್ಸುಗಳನ್ನು ಬಹಳವಾಗಿ ಒಳಗೊಂಡಿದೆಯೆಂದು ತಿಳಿದು ಬರುತ್ತದೆ. ಯಕ್ಷಗಾನವೂ ಜನಪದ ಸಾಹಿತ್ಯವಾಗಿರುವುದರಿಂದ, ಯಕ್ಷಗಾನ ಚತ್ತಾಣಗಳ ಸಾಮಿಪ್ಯ ಸಂಬಂಧದಿಂದ ಮೇಲೆ ಹೇಳಿದ ಸಂದೇಹವು ನಿಜವಾಗಿರಬಹುದೇ ಎಂದು ಗ್ರಹಿಸಬಹುದಾಗಿದೆ. ಆದರೆ ಶ್ರೀ॥ ಮುಳಿಯ ತಿಮ್ಮಪ್ಪಯ್ಯನವರು 'ಪಾರ್ತಿ ಸುಬ್ಬ' ಎಂಬ ತಮ್ಮದೊಂದು ಲೇಖನದಲ್ಲಿ ನಾಗವರ್ಮನು ಹೇಳಿದ 'ಬಾಜನೆಗಬ್ಬ' ಎಂಬ ನಾಟ್ಯಗರಣವೇ ಯಕ್ಷಗಾನದ ಆ ಕಾಲದ ಹೆಸರಾಗಿರಬಹುದೆಂದು ಊಹಿಸಿದ್ದಾರೆ. ನಾಗವರ್ಮನು ಹೇಳಿದ ಬಾಜನೆಗಬ್ಬದ ಲಕ್ಷಣ ಈ ಬಗೆಯಾಗಿದೆ:

> ಪಲತೆಱದ ಪದ್ಯದಿಂದಂ
> ಲಲಿತ ವಚೋರಚನನಿಚಯ ಪದ್ಧತಿಕೆಗಳಿಂ
> ಸಲೆ ನಿಲೆ ಸಮೆದುದು ಸರಸಾ
> ಖಿಲವರ್ಣನಮಾದೊಡದುವೆ ಬಾಜನೆಗಬ್ಬಂ

ಇದು ಯಕ್ಷಗಾನಕ್ಕೆ ಬಹುಮಟ್ಟಿಗೆ ಹೊಂದಿಕೆಯಾಗುತ್ತದೆಯೆನ್ನಬಹುದು. ಆದರೆ ನೃಪತುಂಗನ ಕಾಲದಲ್ಲಿ ಪ್ರಚಾರದಲ್ಲಿದ್ದಿರಬಹುದಾದ ಚತ್ತಾಣವು ಬೇರೆ ರೂಪವನ್ನು ನಾಗವರ್ಮನ ಕಾಲದಲ್ಲಿ ಪಡೆದು, ಅದೇ ಬಾಜನೆಗಬ್ಬವಾಗಿರಬಹುದೆಂದೆಣಿಸಬಹುದು.

ಈ ರೀತಿಯಿಂದ ವಿಚಾರಿಸಿದರೆ, ಯಕ್ಷಗಾನವು ಪ್ರಾಚೀನಕಾಲದಿಂದಲೂ ಪ್ರಚಾರದಲ್ಲಿದ್ದಿರಬೇಕೆಂಬುದನ್ನು ನಿಶ್ಚಯವಾಗಿ ಹೇಳಬಹುದು. ಇದೂ ಅಲ್ಲದೆ ಪಂಪಭಾರತದಲ್ಲಿ ವಿಕ್ರಮಾರ್ಜುನನ ಜೈತ್ರಯಾತ್ರಾವಸರದಲ್ಲಿ ಅವನು ಕನ್ನಡಿಗರ ನೃತ್ಯವನ್ನು ಕಂಡನೆಂಬುದನ್ನೋದುವಾಗ ಕನ್ನಡಿಗರಲ್ಲಿ ಸ್ವತಂತ್ರವಾದ ವಿಶಿಷ್ಟ ರೀತಿಯ ನರ್ತನವಿದ್ದಿರಬೇಕು; ಅದುವೇ ಯಕ್ಷಗಾನವಾಗಿರಲೂ ಬಹುದು ಎಂದು ತರ್ಕಿಸಲವಕಾಶವಿದೆ. ಶ್ರೀ॥ ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ 'ಸಂಸ್ಕೃತ ನಾಟಕ' ದಲ್ಲಿಯೂ ಯಕ್ಷಗಾನ (ಬಯಲಾಟ)ದ ಪ್ರಾಚೀನತೆಯನ್ನು ಪ್ರತಿಪಾದಿಸಿದ್ದಾರೆ.

ಇತ್ತೀಚೆಗೆ ಬಲ್ಲವರು ಕೆಲವರು ಯಕ್ಷಗಾನ ಮಲೆಯಾಳದ ಕಥಕ್ಕಳಿಯಿಂದ ಹುಟ್ಟಿಬಂದಿದೆಯೆಂದು ನಂಬುತ್ತಾರೆ. ಇದಕ್ಕನುಕೂಲವಾಗಿ ಶ್ರೀ ಮುಳಿಯ ತಿಮ್ಮ

ಪ್ಪಯ್ಯನವರು 'ಅಮರಸಿಂಹನ ನಿಘಂಟು "ಯಕ್ಷ ರಕ್ಷೋ ಗಂಧರ್ವ ಕಿನ್ನರಾಃ। ಪಿಶಾಚೋ ಗುಹ್ಯಕಸ್ಸಿದ್ಧೋ ಭೂತೋಽಮೀ ದೇವಯೋನಯಃ" ಎಂದು ಯಕ್ಷರನ್ನು ದೇವಯೋನಿಗಳ ಒಂದು ವರ್ಗದವರನ್ನಾಗಿ ಸಾರುತ್ತಿದೆ. ಈ ಯಕ್ಷರ ಒಡೆಯನಾದ ಕುಬೇರನು ಲಂಕಾನಗರಾಧಿಪತಿಯಾಗಿದ್ದನೆಂದೂ, ರಾವಣನಿಂದ ಸೋಲಿಸಲ್ಪಟ್ಟು ಉತ್ತರದ ಕೈಲಾಸಪರ್ವತಕ್ಕೆ ಹೋದನೆಂದೂ ಪುರಾಣದ ಹೇಳಿಕೆ. ಇದರಿಂದ ಯಕ್ಷಜನಾಂಗದ ಮೂಲನಿವಾಸ ಸ್ಥಾನವು ದಕ್ಷಿಣಪಥವೇ ಆಗಿತ್ತೆಂದು ಹೇಳಬಹುದು" ಎಂದಿದ್ದಾರೆ. ಕಾಳಿದಾಸನ ಮೇಘದೂತದಲ್ಲಿಯೂ ಶಾಪಗ್ರಸ್ತನಾದ ಯಕ್ಷನೊಬ್ಬನು ರಾಮಗಿರ್ಯಾಶ್ರಮಗಳಲ್ಲಿ ವಸತಿಯನ್ನು ಮಾಡಿದನೆಂದು ಉಲ್ಲೇಖವಿದೆ. ಇಂತಹ ಯಕ್ಷರ ಮೂಲನಿವಾಸಸ್ಥಾನವಾದ ದಕ್ಷಿಣ ಹಿಂದುಸ್ಥಾನದಲ್ಲಿ ಈ ಯಕ್ಷಗಾನವು ಇತ್ತು; ಅದು ಮಲೆಯಾಳದಲ್ಲಿ ಕಥಕ್ಕಳಿ ಎಂಬ ಹೆಸರಿನಿಂದಲೂ ಕನ್ನಡ ನಾಡಿನಲ್ಲಿ ಬಯಲಾಟ ಎಂಬ ಅಭಿಧಾನದಿಂದಲೂ ಇತ್ತೆನ್ನಬಹುದು.

ಇಂತಹ ಯಕ್ಷಗಾನವು ಕನ್ನಡಿಗರ ಜನಪದ ಸಾಹಿತ್ಯವಾಗಿ ಇಂದೂ ಉಳಿದಿದೆ. ಇದರಲ್ಲಿ ಪ್ರಧಾನವಾಗಿ 'ತಾಳಮದ್ದಳೆ' (ಅಥವಾ ಮೃದಂಗಸೇವೆ) ಮತ್ತು 'ಬಯಲಾಟ' ಎಂಬ ಎರಡು ವಿಭಾಗಗಳಿವೆ. ಒಂದಕ್ಕೂ ಇನ್ನೊಂದಕ್ಕೂ ಬಹಳ ಅಂತರವಿದೆ. ಆದರೆ ಕೆಲವಂಶಗಳು ಎರಡಕ್ಕೂ ಸಮಾನವಾಗಿದೆ. 'ಹಿಮ್ಮೇಳ'ವೆಂಬುದು ಎರಡು ಬಗೆಯವುಗಳಲ್ಲಿಯೂ ಸಮಾನಸ್ಥಾನದ್ದಾಗಿದೆ. 'ಹಿಮ್ಮೇಳ' ಆಗಬೇಕಾದರೆ 'ಭಾಗವತ', 'ಮದ್ದಳೆಗಾರ', 'ಚೆಂಡೆಯವ' ಮತ್ತು 'ಶ್ರುತಿ ಹಿಡಿಯುವಾತ' ಇರಬೇಕು. ಶ್ರುತಿಹಿಡಿಯುವಾತನು ಭಾಗವತನಿಗೆ ಅನುಕೂಲವಾದ ರೀತಿಯ ಶ್ರುತಿಯನ್ನು ಬಾರಿಸುತ್ತಾನೆ. ಮೊದಮೊದಲು ಒಂದು ಸೋರೆ ಬುರುಡೆಯ ಶ್ರುತಿಯನ್ನು ಹದವಾಗಿ ಊದುವುದಿತ್ತು. ಕ್ರಮೇಣ ಇದರ ಸ್ಥಾನದಲ್ಲಿ ಶ್ರುತಿಗಾಗಿಯೇ ಉಪಯುಕ್ತವಾಗುವ ಶ್ರುತಿ ಪೆಟ್ಟಿಗೆಯನ್ನು ತಂದರು. ಈಗೀಗ ಅದೂ ಹೋಗಿ 'ಹಾರ್ಮೋನಿಯಂ' ಬಂದಿದೆ. ಒಂದು ಸಲ ಭಾಗವತರೊಬ್ಬರು ಹಾಡುತ್ತಿದ್ದಾಗ, ಇನ್ನೊಬ್ಬರು ಹಾರ್ಮೋನಿಯಮ್ಮನ್ನು ನುಡಿಸಿದುದನ್ನೂ ಕಂಡವರುಂಟು. ಇನ್ನು ಮುಂದಕ್ಕೆ ಇದಕ್ಕಿಂತಲೂ ಹೆಚ್ಚಿನ ಪ್ರಗತಿಯಾಗ[...] ದೆಂದು ನಂಬಬಹುದು.

ಶ್ರುತಿ ಹಿಡಿಯುವವನ ಮುಂದೆ 'ಭಾಗವತ' (ನಿಂತು) ಕುಳಿತುಕೊಳ್ಳುತ್ತಾನೆ. ಅವನ ಕೈ[...] ಜಾಗಟೆ ಮತ್ತು ಕೋಲು ಇರುತ್ತವೆ. ಅವನು [...]ವಾಗ ತಾಳದ ಗತಿಯನ್ನು ಜಾಗಟೆಗೆ ಕೋಲಿ[...] ಹೊಡೆದು ತೋರಿಸುತ್ತಾನೆ. ಇವನ ಬಲಪಕ್ಕ[...] 'ಮದ್ದಳೆಗಾರ'ನು ಕುಳಿತುಕೊಂಡು ಮೃದಂಗ[...] ಬಾರಿಸುತ್ತಾನೆ. ಎಡಗಡೆ 'ಚೆಂಡೆಯವ'ನು ಸಂ[...] ವೊದಗಿದಾಗ ಚೆಂಡೆಯನ್ನು ಬಾರಿಸುತ್ತಾನೆ. [...] ಮದ್ದಳೆಯ ಮಟ್ಟಿಗೆ ಈ ಹಿಮ್ಮೇಳದಲ್ಲಿ ಸ್ವಲ್ಪ ಸುಧಾ[...]ಯಾಗಿದೆ. 'ಚೆಂಡೆ'ಯನ್ನು ಬಾರಿಸಿದರೆ ಹೆಚ್ಚಿನ [...]ಗುವುದೆಂದು ಅದನ್ನು ಆಧುನಿಕರು ಬಿಡುತ್ತ[...]ದ್ದಾರೆ. ಭಾಗವತರೂ ಇತ್ತೀಚೆಗೆ ಪದ್ಯ ಹಾಡಿ ಮು[...] ಮೇಲೆ ಹೊಡೆಯುತ್ತಾ ಇದ್ದ 'ಮುಕ್ತಾಯ'ದ [...]ಗಳನ್ನು ಬಿಟ್ಟು, ಪದ್ಯನಿಂತೊಡನೆಯೇ ತಾಳದ ಪೆಟ್ಟ[...] ನಿಲ್ಲಿಸುವ ರೂಢಿ ಹೆಚ್ಚುತ್ತಾ ಇದೆ. ಕೆಲವು ಸಲ ಭಾ[...]ವತನೂ ಮದ್ದಳೆಗಾರನೂ ತಮ್ಮ ತಮ್ಮ ವಿದ್ಯೆಗ[...] 'ಸಾಧಕ'ದಲ್ಲಿ ಉಪಯೋಗಿಸುವದೂ ಕಂಡುಬರುತ್ತ[...] ಆದರೆ ಎಲ್ಲಾ ಭಾಗವತರೂ ಯಕ್ಷಗಾನದ ನಿಯ[...]ದಂತೆ ಪದ್ಯವನ್ನು ಮಂದ್ರದಲ್ಲಿ ಮುಕ್ತಾಯಗೊಳಿ[...] ಮಧ್ಯಮದಲ್ಲೇ ಮುಕ್ತಾಯಗೊಳಿಸುವುದು ಕ[...] ಬರುತ್ತದೆ.

'ತಾಳಮದ್ದಳೆ' ಎಂಬುದು 'ಬಯಲಾಟ'ಕ್ಕ[...] ಬೇರೆ ರೀತಿಯಿರುವುದಕ್ಕೆ ಕಾರಣವಿದೆ. ಬಯಲಾಟವ[...] ಅದರ ಹೆಸರೇ ಹೇಳುವಂತೆ ಬಯಲಲ್ಲಿ ಆಡಿ ತೋ[...]ಬೇಕು. ಆದರೆ ಮಳೆಗಾಲದಲ್ಲಿ ಇದು ಅಸಾಧ್ಯವಾದ[...] ಮನೆ ಇಲ್ಲವೆ ಇತರ ಕಟ್ಟಡಗಳ ಒಳಗೆ ಹಿಮ್ಮೇಳದವ[...] 'ಅರ್ಥಧಾರಿ'ಗಳೂ ಕಲೆತು ಕುಳಿತು ವಿನೋದದಿ[...] ಕಾಲಕಳೆಯಲು ಈ ತಾಳಮದ್ದಳೆಯನ್ನು ರೂ[...] ತಂದರು. ಇದಕ್ಕೆ ಭಾಗವತನ 'ತಾಳ' ಮತ್ತು ಮ[...]ಯವನ 'ಮದ್ದಳೆ'ಯೇ ಮುಖ್ಯವಾದುದರಿಂದ [...] ಹೆಸರು ಬಂದಿರಬೇಕು. ಇದರಲ್ಲಿ ಹಿಮ್ಮೇಳದವರು ಪ[...] ಹಾಡುವಾಗ, ಇಲ್ಲವೆ, ಹಾಡಿ ಮುಗಿಸಿ 'ಮುಕ್ತಾ[...] ಕೊಡು'ವಾಗ ಯಾರೂ ಕುಣಿಯುವುದಿಲ್ಲ. ಅರ್ಥಧಾ[...]


THERE IS ONLY
ONE SOVEREIGN
MERIT
The name and fame of Sovereign products have spread throughout India and abroad purely due to their quality and merit. Scientific and exclusive processes of manufacture over many years have established "SOVEREIGN PRODUCTS" as Supreme.

ಗಳು ಕುಳಿತುಕೊಂಡೇ ಬೇರೆ ಬೇರೆ ಪಾತ್ರಗಳನ್ನು, ಯಾವ ವೇಷಭೂಷಣಗಳೂ ಇಲ್ಲದೆ ವಹಿಸಿಕೊಳ್ಳುವರು, ಪದ್ಯ ಹಾಡಿ ಮುಗಿದೊಡನೆಯೇ ಇವರು ಅರ್ಥವನ್ನು ಹೇಳುವರು. ರಂಗಸ್ಥಳದಲ್ಲಿ ಅಭಿನಯಿಸಿ ತೋರಿಸುವ ಎಷ್ಟೋ ವಿಷಯಗಳನ್ನು ಇವರು ಬಾಯಿಂದಲೇ ಆಡಿ ತೋರಿಸಬೇಕಾಗುತ್ತದೆ. ಆದರೆ 'ಕೈಕರಣ' (ಹಸ್ತ ಚಾಲನ), ಮುಖಭಾವಪರಿವರ್ತನ, ರಸಾನುಗುಣವಾದ ಸ್ವರವಾಕ್ಯಗಳ ಪ್ರಯೋಗ ಇತ್ಯಾದಿಗಳೆಲ್ಲಾ ಕುಳಿತಲ್ಲಿಂದಲೇ ಬರುತ್ತವೆ. ಸುವ್ಯವಸ್ಥಿತ ರೀತಿಯ ತಾಳ ಮದ್ದಳೆಗಳಲ್ಲಿ ಹಿಮ್ಮೇಳದವರ ಮುಂದುಗಡೆ ಅರ್ಥಧಾರಿಗಳು ಎದುರೆದುರಾಗಿ ಕುಳಿತುಕೊಳ್ಳುವರು. ಈ ಶತಮಾನದಲ್ಲಿ ಇದರಲ್ಲಿ ಅನೇಕ ಸುಧಾರಿತರೂ ವಿದ್ವಾಂಸರೂ ಭಾಗವಹಿಸುತ್ತಿರುವರು. ಇವರು 'ಪ್ರಸಂಗ'ಗಳಲ್ಲಿರುವ ಎಲ್ಲಾ ಪದ್ಯಗಳಿಗೂ ಅರ್ಥವನ್ನು ವಿವರಿಸುವುದಾದರೆ ಒಂದು ಪೂರ್ಣಪ್ರಸಂಗವನ್ನು ಪೂರೈಸುವುದಕ್ಕೆ ಇವರಿಗೆ ಒಂದು ರಾತ್ರಿ ಸಾಲದು. ಆದಕಾರಣ ಪ್ರಸಂಗದ ವಸ್ತುವಿಗೆ ದೋಷತಟ್ಟದಂತೆ, ಪ್ರಸಂಗದ ಅನೇಕ ಪದ್ಯಗಳಿಗೆ ಕರ್ತರೀಪ್ರಯೋಗಮಾಡುವರು. ಸಾಮಾನ್ಯವಾಗಿ ರಾತ್ರಿ ಹತ್ತು ಗಂಟೆಗೆ ಆರಂಭವಾಗಿ ಪ್ರಾತಃಕಾಲ ಆರು ಗಂಟೆಗೆ ಕೊನೆಗೊಳ್ಳಬಹುದಾದ ತಾಳಮದ್ದಳೆಗೆ ಇವರು ಸುಮಾರು ಇನ್ನೂರು ಪದ್ಯಗಳಷ್ಟನ್ನಾದರೂ ಇಟ್ಟುಕೊಳ್ಳುವುದು ಅಪೂರ್ವ. ಒಂದು ತಾಸಿನ ಅವಕಾಶದಲ್ಲಿ ಇವರು ಹೆಚ್ಚುಕಡಮೆ ಹದಿನೈದು ಇಪ್ಪತ್ತು ಪದ್ಯಗಳ ಅರ್ಥವನ್ನು ಹೇಳುತ್ತಾರೆಂದರೂ ಅದನ್ನು ಅಲ್ಲಗಳೆಯುವಂತಿಲ್ಲ. ಎಷ್ಟೋ ಪದ್ಯಗಳನ್ನು ಬಿಟ್ಟುಬಿಟ್ಟರೂ ಅವುಗಳ ಅರ್ಥವನ್ನು ಹಿತಮಿತವಾಗಿ ಹೇಳುವರು.

ಬಯಲಾಟದ ಬಗೆಯೇ ಬೇರೆ. ಹೊತ್ತುಕಂತುವ ವೇಳೆಯಲ್ಲಿ ಚೆಂಡೆಯನ್ನು ಬಾರಿಸುತ್ತಾರೆ. ಇದಕ್ಕೆ 'ಕೇಳಿಬಡಿ'ಯುವುದೆಂದು ಹೆಸರು. ಈ ಶಬ್ದವನ್ನು ಕೇಳಿದೊಡನೆಯೇ ಸುತ್ತಮುತ್ತಲಿನ ಹಳ್ಳಿಯವರಿಗೆ ಸಮೀಪದಲ್ಲಿ ಆಟವಿದೆಯೆಂಬುದು ತಿಳಿಯುತ್ತದೆ. ಕೇಳಿ (ಎಂದರೆ ಆಟ) ಇದೆಯೆಂಬ ವರ್ತಮಾನವನ್ನು ಗಾವಿಲರ ಕಿವಿಗೆ ಸುದ್ದಿಯಾಗಿ ಕೇಳಿಸುವುದಕ್ಕಾಗಿ ಬಡಿಯುವುದರಿಂದ ಇರಬಹುದು ಇದಕ್ಕೆ ಈ ಹೆಸರು ಬಂದುದು. ಇದಾದ ಮೇಲೆ 'ಚೌಕಿ' (ವೇಷಹಾಕುವ ಸ್ಥಳ) ಯಲ್ಲಿ ಗಣಪತಿ ಪೂಜೆಯಾಗಿ ಹಿಮ್ಮೇಳದವರೊಂದಿಗೆ 'ಕೋಡಂಗಿ'ಗಳು ಹೊರಟು, ರಂಗಸ್ಥಳಕ್ಕೆ ಹೋಗಿ, ಕುಣಿಯತೊಡಗುವವು. ('ಕೋಡಂಗಿ' ಎಂಬುದಕ್ಕೆ ಹಾಸ್ಯಗಾರ ಎಂಬರ್ಥವಿದೆ; ಇದೇ ಅರ್ಥದ ಔಚಿತ್ಯವನ್ನು ನಾವು ಈ 'ಕೋಡಂಗಿ'ಗಳ ನಟನೆ, ಕುಣಿತಗಳಲ್ಲಿ ಕಾಣುತ್ತೇವೆ). ಈ ಹಿಮ್ಮೇಳದಲ್ಲಿ 'ಭಾಗವತ'ನ ಬದಲಾಗಿ 'ಸಂಗೀತಗಾರ' ನಿರುತ್ತಾನೆ. ಇವನು ದೇವತಾಸ್ತುತಿಯ ಪದ್ಯಗಳನ್ನೋ ಇನ್ನಿತರ 'ತುಂಡು ಪದ'ಗಳನ್ನೋ ಹಾಡಿ, ಕೋಡಂಗಿ ಇತ್ಯಾದಿ ವೇಷಗಳನ್ನು 'ಕುಣಿಸು'ತ್ತಾನೆ. ಈ ಕೋಡಂಗಿಗಳ ಕುಣಿತವು ಸ್ವಲ್ಪಕಾಲ ನಡೆದ ಬಳಿಕ 'ನಿತ್ಯವೇಷ'ಗಳು ಬರುತ್ತವೆ. ಅನಂತರ ಪ್ರಸಂಗ ಪೀಠಿಕೆಯವರೆಗೆ ಹಾಸ್ಯ, ಅರ್ಧನಾರಿ, ಚಪ್ಪರಮಂಚ, ಇತ್ಯಾದಿಗಳು ಗಾವಿಲರ ಮನರಂಜನೆಗಾಗಿ ಬಂದು, ತಂತಮ್ಮ ಕಾರ್ಯಭಾಗವನ್ನು ನಿರ್ವತಿಸಿ ಹೋಗುತ್ತವೆ. (ಈಗಿನ ಬಯಲಾಟಗಳಲ್ಲಿ ಹಾಸ್ಯವೊಂದು ಉಳಿದಿದೆ). ಆ ಬಳಿಕ 'ಸ್ತ್ರೀವೇಷ'ವೂ, ಅದರ ಪ್ರವೇಶದ ಸ್ವಲ್ಪಾವಕಾಶದಲ್ಲಿ ಹಾಸ್ಯಗಾರನೂ ರಂಗಸ್ಥಳದಲ್ಲಿ ಕಾಣಿಸಿ, ಕುಣಿದು ಹೋಗುವುದು ಕ್ರಮವಾಗಿದೆ. ಈ ರೀತಿ ನಾಟಕದಲ್ಲಿರುವಂತೆ ಪೂರ್ವರಂಗವಿಧಾನವು ಸಾಂಗವಾಗಿ ಶಾಸ್ತ್ರೀಯವಾಗಿ ನಡೆದ ಬಳಿಕ ಪ್ರಸಂಗವಾರಂಭವಾಗುವುದು. ಪೀಠಿಕೆಯ ಅನಂತರ ಬೆಳಗಿನವರೆಗೂ 'ಪ್ರಸಂಗವೇ' ಮುಂಬರಿಯುತ್ತದೆ. ಇದರಲ್ಲಿ ಬರುವ ವಿವಿಧ ವೇಷಗಳಿಗೆ ಬೇರೆ ಬೇರೆ ಹೆಸರುಗಳಿವೆ. ಪೀಠಿಕೆಯೊಡನೆಯೇ ಬರುವ ವೇಷಕ್ಕೆ 'ಪೀಠಿಕೆ ವೇಷ'ವೆಂದು ನಮ್ಮ ಕಡೆಯ ಹೆಸರು. ಕೆಲವು ಪ್ರಸಂಗಗಳಲ್ಲಿ ಬರುವ ಎಳೆಯಪ್ರಾಯದ ಮತ್ತು ಬಹಳ ಸಾಹಸಿಗಳಾದ ಅಭಿಮನ್ಯು ಮುಂತಾದವರ ರೀತಿಯ ವ್ಯಕ್ತಿಗಳ ವೇಷಗಳನ್ನು 'ಪುಂಡುವೇಷ' ವೆನ್ನುವರು. 'ತುಂಡು ವೇಷ'ವೆಂಬುದು ಗೌಣಪಾತ್ರಗಳಿಗಿರುವ ಹೆಸರು. 'ಬಣ್ಣದ ವೇಷ'ವು ಹೆಚ್ಚಾಗಿ ಪ್ರತಿನಾಯಕ ಸ್ಥಾನದಲ್ಲಿರುವ 'ರಾಕ್ಷಸ' ಪಾತ್ರ. ಪ್ರತಿಯೊಂದು ಪ್ರಸಂಗದಲ್ಲೂ ಕೊನೆಗೆ ಒಂದಾದರೂ 'ಬಣ್ಣದ ವೇಷ' ಬರುವುದಿದೆ (ರಾಮ ಪಟ್ಟಾಭಿಷೇಕ ಮುಂತಾದ ಕೆಲವೇ ಪ್ರಸಂಗಗಳಲ್ಲಿ ಬರುವುದಿಲ್ಲ). ಇಂತಹ ವೇಷಗಳು ರಂಗಸ್ಥಳಕ್ಕೆ ಬಂದುಹೋಗುವುದರಲ್ಲಿ ನಿಯಮವಿದೆ. ಮತ್ತು ಒಂದೊಂದು ಪಾತ್ರಗಳ

ಕುಣಿತಗಳ ರೀತಿ ಒಂದೊಂದು. ಆದರೆ ಈ ಶತಮಾನ ದಲ್ಲಿ ಇವುಗಳಿಗೆಲ್ಲಾ ಹೊಸತನದ 'ಗಾಳಿ' ತಾಗಿದೆ. ನಮ್ಮ ಹಿರಿಯರಲ್ಲನೇಕರು ಪೀಠಿಕೆಯ ಚೆಂಡೆಯ ಪೆಟ್ಟಿನಿಂದಲೇ ರಾಮಾಯಣ, ಭಾರತಗಳ ಪ್ರಸಂಗಗಳನ್ನು ಬಹುದೂರದಿಂದಲೇ ಗೊತ್ತು ಹಚ್ಚುತ್ತಿದ್ದರಂತೆ! ಈಗ ರಂಗಸ್ಥಳದಲ್ಲಿ ವೇಷಗಳನ್ನು ಕಂಡರೂ ಪ್ರಸಂಗವನ್ನು ತಿಳಿಯುವುದು ಕಷ್ಟವಾಗಿದೆ.

ರಂಗಸ್ಥಳದ ಅಳತೆಯು ನಿಯಮಿತವಾಗಿದೆ. ಈ ನಿಯಮವನ್ನು ಮೀರಿ ರಂಗಸ್ಥಳದ ನಿರ್ಮಾಣವಾಗುವುದು ಈಗಿನ ಸುಧಾರಣೆ. ಈ ರಂಗಸ್ಥಳವೆಂಬುದು ನಾಟಕ ರಂಗಭೂಮಿಯ ಎಲ್ಲಾ ನಿಯಮಗಳನ್ನು ಅನುಸರಿಸುತ್ತಿದೆಯೆಂದರೆ ಹೆಚ್ಚಲ್ಲ. ಏಕೆಂದರೆ, ನಾಟಕ ರಂಗಭೂಮಿಯಲ್ಲಿ ತೋರಿಸಲ್ಪಡಬಾರದೆಂದು ನಿಷಿದ್ಧವಾದ ಮರಣ ಭೋಜನ ಇತ್ಯಾದಿಗಳನ್ನು ಇಲ್ಲಿಯೂ ಪ್ರದರ್ಶಿಸಲಾರದೆಂದಿದೆ. ಹೊಸ ಕಾಲದ ರಂಗ್ಥಸಳಗಳಲ್ಲಿ ಅವುಗಳಿಗೂ ಎಡೆಯಿಲ್ಲವೆಂದು ಹೇಳುವಂತಿಲ್ಲ.

ರಂಗಸ್ಥಳದಲ್ಲಿ ನಿಂತುಕೊಂಡು 'ಭಾಗವತ'ನು ಹಾಡುತ್ತಿರುವಾಗ ಮತ್ತು ಜಾಗಟೆಯನ್ನೆತ್ತಿ ಮುಕ್ತಾಯವನ್ನು ಹೊಡೆಯುವಾಗ ವೇಷಗಳು ಕುಣಿದು, ಆಮೇಲೆ ಅರ್ಥಹೇಳುವವು. ಹಿಂದಿನ ಕಾಲದಲ್ಲಿ ನಿರಕ್ಷರ ಕುಕ್ಷಿಗಳೂ 'ಪೆಟ್ಟಿಗೆಹೊರುವ ಕೆಲಸ'ಕ್ಕೆ 'ದಶಾವತಾರ ಆಟದ ಮೇಳ'ಗಳನ್ನು ಸೇರಿ, ಕ್ರಮೇಣ ಮಾತಾಡದ ಚಿಕ್ಕ ಚಿಕ್ಕ ವೇಷಗಳನ್ನು ಹಾಕಿ, ಅಭ್ಯಾಸಮಾಡಿ, ಕೊನೆಗೆ ಪ್ರಮುಖ ವೇಷಗಳನ್ನೂ ಹಾಕುವ ರೂಢಿಯಿತ್ತು. ಈಗಲೂ ಇದು ಪೂರ್ಣ ಮರೆಗೊಂಡಿಲ್ಲ. 'ಮೇಳ'ಕ್ಕೆ ಸೇರುವುದು ಹೀನವೆಂದೇ ಹಲವರ ನಂಬಿಕೆ ಇದಕ್ಕೆ ಕಾರಣವಾಗಿದೆ. ಆದರೂ ಈಗೀಗ ಕೆಲವರು ಸುಧಾರಿತರೆನ್ನಿಸಿದವರೂ ಆಟಕ್ಕೆ ವೇಷಹಾಕಲು ಹೋಗುತ್ತಾರೆ. ಮೊದಮೊದಲು ಅಶಿಕ್ಷಿತರು ವೇಷಹಾಕುತ್ತಿದ್ದುದರಿಂದ ಬೆಳಗಾಗುವುದರೊಳಗೆ ಸುಮಾರು ನಾನೂರು ಐನೂರು ಪದ್ಯಗಳ ಪ್ರಸಂಗಗಳನ್ನು, ಕುಣಿದು, ಅರ್ಥ ವಿವರಿಸಿ, ಮುಗಿಸುತ್ತಿದ್ದರು. ಶಿಕ್ಷಿತರು ಸೇರತೊಡಗಿದಂದಿನಿಂದ ಪ್ರಸಂಗವು ಸಂಪೂರ್ಣವಾಗಿ, ಸಾಂಗವಾಗಿ ನಡೆಯುವುದು ದುರ್ಲಭವಾಗುತ್ತಾ ಇದೆ.

ಯಕ್ಷಗಾನ ಪ್ರಪಂಚದಲ್ಲಿ ದೇಶಾನುಗುಣವಾಗಿ ಎರಡು ಕವಲುಗಳಾಗಿವೆ. ಒಂದನ್ನು ತೆಂಕು ತಿಟ್ಟು ಎಂದೂ, ಇನ್ನೊಂದನ್ನು ಬಡಗು ತಿಟ್ಟು ಎಂದೂ ನಿರ್ದೇಶಿಸುವ ಕ್ರಮವಿದೆ. ಸಾಮಾನ್ಯವಾಗಿ ಮಂಗಳೂರು ಜಿಲ್ಲೆಯಲ್ಲಿ ಮತ್ತು ಇದರ ದಕ್ಷಿಣ ಭಾಗದಲ್ಲಿ ತೆಂಕು ತಿಟ್ಟಿನವರ ಯಕ್ಷಗಾನಗಳೂ, ಉಡುಪಿ, ಕಾರ್ಕಳ ಮುಂತಾದ ಉತ್ತರ ದಿಕ್ಕಿನ ತಾಲ್ಲೂಕುಗಳಲ್ಲಿಯೂ, ಅಲ್ಲಿಂದ ಉತ್ತರಕ್ಕೂ ಬಡಗು ತಿಟ್ಟನವರ ಯಕ್ಷಗಾನಗಳೂ ಪ್ರಚಾರದಲ್ಲಿವೆ. ಇವೆರಡರಲ್ಲಿಯೂ ಬಹುಮಟ್ಟಿಗೆ, ಎಲ್ಲಾ ವಿಷಯಗಳಲ್ಲಿಯೂ ತಾರತಮ್ಯಗಳುಂಟು. ತೆಂಕು ತಿಟ್ಟಿನ ಭಾಗವತನು ಜಾಗಟೆಯವನ್ನುಪಯೋಗಿಸಿದರೆ, ಬಡಗು ತಿಟ್ಟನವನು 'ಚಕ್ರತಾಳ' ವನ್ನುಪಯೋಗಿಸುತ್ತಾನೆ. ಎರಡೂ ಕಡೆಯ ಮುಕ್ತಾಯಗಳಲ್ಲಿಯೂ, ಹಾಡುವಿಕೆಯಲ್ಲಿಯೂ ವ್ಯತ್ಯಾಸಗಳಿವೆ. ಚೆಂಡೆ, ಚೆಂಡೆಯ ಪೆಟ್ಟುಗಳೂ ಒಂದು ತಿಟ್ಟನದು ಇನ್ನೊಂದರೊಡನೆ ಹೋಲುವುದಿಲ್ಲ. ವೇಷಹಾಕುವ ರೀತಿಯಲ್ಲೂ, ಕುಣಿತದ ರೀತಿಯಲ್ಲಿಯೂ ಹೀಗೆಯೇ ಇದೆ. ಆದರೂ ಒಂದು ವಿಚಾರದಲ್ಲಿ ಎರಡೂ ತಿಟ್ಟನವರು ಸಮಾನರು. ಆತ್ಮಸ್ತುತಿ ಪರನಿಂದೆಗಳಲ್ಲಿ ಎರಡು ತಿಟ್ಟನವರೂ ಹಿಂದಿಲ್ಲ.

ತೆಂಕು ತಿಟ್ಟನವರು ಹೆಚ್ಚಾಗಿ ಒಂದು ರಾತ್ರಿಯಲ್ಲಿ ಒಂದೇ ಪ್ರಸಂಗವನ್ನು ಆರಂಭದಿಂದ ಕೊನೆಯವರೆಗೆ ಆಡುವ ರೂಢಿಯಿದೆಯಾದರೆ, ಬಡಗು ತಿಟ್ಟನವರು ಕೆಲವು (ಬಹಳವಾಗಿ ಎರಡು) ಪ್ರಸಂಗಗಳ ಮುಖ್ಯ ಮತ್ತು ರಸವತ್ತಾದ ಭಾಗಗಳನ್ನು ಆಡಿ ತೋರಿಸುವರು. ಕೆಲವು ವೇಳೆ ರಾಮಾಯಣದ ಪ್ರಸಂಗವು ಆರಂಭವಾಗಿ ಕೊನೆಯಾಗಿ ಭಾರತದ ಪ್ರಸಂಗವನ್ನು ಆಡಿ ತೋರಿಸುವುದೂ ಇರಬಹುದು.

ತಾಳಮದ್ದಳೆಯಲ್ಲಿಯೂ ತೆಂಕು ಬಡಗು ತಿಟ್ಟುಗಳೊಳಗೆ ವ್ಯತ್ಯಾಸವಿದೆ. ಹಿಂದೆ ಈ ವ್ಯತ್ಯಾಸ ಇದ್ದಿರಲಿಲ್ಲವೆಂದು ಊಹಿಸುವುದಕ್ಕೆ ಆಧಾರವಿದೆ. ಏಕೆಂದರೆ ತೆಂಕು ತಿಟ್ಟಿನ ಹಳೆಯ ಅರ್ಥಧಾರಿಗಳು 'ಒಡ್ಡೋಲಗ ಕೊಡು'ವ ಕ್ರಮವಿದ್ದಿತೆಂದೂ ಕೇಳಿದವರಿರಬಹುದು. ಇದೇ ಬಗೆಯಲ್ಲಿ 'ಒಡ್ಡೋಲಗ ಕೊಡು'ವ ಸಂಪ್ರದಾಯವು ಬಡಗು ತಿಟ್ಟನವರಲ್ಲಿ ಇಂದಿಗೂ ಇದೆ. ಯಾವ ದಾದರೂ ಪ್ರಮುಖ ಪಾತ್ರವು ಮಾತಿಗಾರಂಭಿಸುವಾಗ ತಾನು ಇರುವ ಸ್ಥಳ, ತನ್ನ ಹೆಸರು ಬಿರುದು ಇತ್ಯಾದಿ

ಗಳನ್ನು ಭಾಗವತನ ನಿಶ್ಚಿತ ಪ್ರಶ್ನೆಗಳಿಗೆ ಉತ್ತರರೂಪ ವಾಗಿ ತಿಳಿಸುವ ಕ್ರಮಕ್ಕೆ 'ಒಡ್ಡೋಲಗ ಕೊಡು'ವು ದೆಂದು ಹೆಸರು. ಈ ಕ್ರಮವನ್ನು ತೆಂಕು ತಿಟ್ಟಿನ ಆಧುನಿಕರೂ ಸಂಪೂರ್ಣವಾಗಿ ಬಿಟ್ಟಿದ್ದಾರೆನ್ನಬಹುದು.

ತಾಳಮದ್ದಳೆಯಲ್ಲಾಗಲೀ, ಬಯಲಾಟದಲ್ಲಾಗಲೀ ಪಾತ್ರಧಾರಿಗಳಿಗೆ ಮುಖ್ಯವಾಗಿ ಬೇಕಾದುದು ಪ್ರತ್ಯುತ್ಪನ್ನಮತಿ. ಪರಸ್ಪರ ಮಾತಾಡುವಾಗ ವಾದವುಂಟಾದೊಡನೆಯೇ ಪ್ರಶ್ನೆಗೆ ಸಮರ್ಪಕವಾದ ಸಂದರ್ಭೋಚಿತವಾದ ಉತ್ತರ ಹುಟ್ಟುವ ಶಕ್ತಿಯಿಲ್ಲದಿದ್ದರೆ, ಸಂಭಾಷಣೆಯು ನೀರಸವೂ ನಿರರ್ಥಕವೂ ಆಗಿ, ರಸಾಭಾಸ ವಾಗುವುದು. ಅಲ್ಲದೆ, ಇದೇ ಶಕ್ತಿಯ ನ್ಯೂನತೆಯಿಂದ ವೈಯಕ್ತಿಕ ಟೀಕೆ ಟಿಪ್ಪಣಿಗಳು ತೊಡಗಿ, ಅನ್ಯೋನ್ಯ ಕಲಹಗಳುಂಟಾಗುವ ಸಂದರ್ಭವೇ ಬಂದುಬಿಡುತ್ತದೆ. ಆದರೆ ತೆಂಕು ತಿಟ್ಟಿನ ಬಯಲಾಟದವರು ತಮ್ಮ ಕುಣಿತ ಅಬ್ಬರಗಳಿಂದ ಇನ್ನೊಬ್ಬನನ್ನು ಸೋಲಿಸುವ ಕಾಲವೂ ಇತ್ತು; ಈಗಲೂ ಅದು ಮರೆಯಾಗಿಲ್ಲ. ಈಗೀಗ ಬಹು ಮಂದಿ ಶಿಕ್ಷಿತರು ಯಕ್ಷಗಾನ ಸೇವೆಯಲ್ಲಿ ತೊಡಗಿರುವುದರಿಂದ ಈ ಪ್ರವೃತ್ತಿಯು ಕಡಮೆಯಾಗುತ್ತಾ ಇದೆ.

ಯೋಗ್ಯ ಅರ್ಥಧಾರಿಯಾಗುವವನು ವಾಗ್ಮಿಯಾಗಿರ ಬೇಕು; ಮತ್ತು ಅವರಲ್ಲಿ ಎದುರಿನವರನ್ನು ಕೆಣಕುವ ಅಭ್ಯಾಸವಿರಬಾರದು. ಪ್ರಸಂಗದ ಕಥಾಸರಣಿಯನ್ನು ಬಿಡದೆ, ಪದ್ಯವನ್ನು ಸಂಪೂರ್ಣವಾಗಿ ವಿವರಿಸುವ ಜಾಣ್ಮೆ ಆತನಲ್ಲಿರಬೇಕು. ಪದ್ಯಾರ್ಥವನ್ನು ಹೇಳುವಾಗ ವಿಷಯವನ್ನು ತುಂಬುವುದಕ್ಕಾಗಿ, ಇಲ್ಲವೇ, ತಾನು ವಹಿಸುವ ಪಾತ್ರದ ಸಂಪೂರ್ಣಸ್ವಭಾವವನ್ನು ಚಿತ್ರಿಸುವುದಕ್ಕಾಗಿ ಅವನು ಹಲವು ಗ್ರಂಥಗಳನ್ನು ಓದಿರಬೇಕು. ಹೀಗಿದ್ದರೆ, ಯಕ್ಷಗಾನವು ಜನರಂಜನೆಯನ್ನು ಮಾಡಿ, ಕನ್ನಡ ನಾಡಿನ ನಾಟ್ಯಗರಣವನ್ನು ಅಭಿವೃದ್ಧಿಗೊಳಿಸೀತೆಂಬುದರಲ್ಲಿ ಸಂದೇಹವಿಲ್ಲ.

ಟಿ. ಗೋಪಾಲಕೃಷ್ಣಭಟ್ಟ

## ಸಿಡಿಲ ಕೈ

ಸಿಡಿಲಕೈಯಲಿ ಹಿಡಿದು ಸೊಕ್ಕಿರುವೆ, ಎಲೆ ಇಂದ್ರ,
ನಿನ್ನ ಪದವಿಯ ದರ್ಪಕದು ಕುರುಹು ಎನುತೆ!
ನಿನ್ನ ಬಗೆಯೆಣಿಕೆಗಳೊ ಆಣತಿಗೆ ಮಣಿಯದಿರೆ
ಜಗ ಜನಾಂಗಗಳನ್ನು ಸುಟ್ಟುರಿಪೆನೆನುವೆ.
ನಿನ್ನ ರಥಗಳ ಗಾಲಿ ನಭದ ಭೋಗದಿ ತಿರುಪಿ
ಮುಗಿಲುಗಳ ಮೆಟ್ಟುತಿರೆ ಆರ್ಪೆ ಗುಡುಗಿ.
ದಾರಿಯಡ್ಡಕೆ ಒಡ್ಡಿ ಬಲಿತೀತು ಎಂಬುದನು
ನಿನ್ನ ಕಣ್ಣುರಿ ಬೆಂಕಿ ಕರಿಕುಗೊಳಿಸುತಿದೆ.
ಜಗದೆಲ್ಲ ಐಶ್ವರ್ಯ ಪದವಿ ಹಿರಿಹೆಮ್ಮೆಗಳು
ಉಂಟಾದರೇಂ ಬಂತೆ ದಿವ್ಯತೆಯ ಸೊಬಗು?
ನೀನೊಲಿವಹಲ್ಯೆಯರ ಬೆಂದ ಬಾಳಿನ ಭಾಗ್ಯ
ಸೊದೆಯುಣಿಸಿಗೇಂ ಕಿರಿದೆ ಶುಚಿ ಬಾಳತಣಿವು?
ಇಚ್ಛೆಬಂದಂತೆಲ್ಲ ತುಳಿಯುತಿರೆ ಎತ್ತುತಿರೆ
ದೇವತನ ಮೆರೆದೀತೆ? ಇಳೆಮೆಚ್ಚೆ, ಗುಣವೆ, ಹೆಚ್ಚೆ?

ವಿ. ಸೀ.

# ಕನ್ನಡ ಪತ್ರಿಕೋದ್ಯಮದ ಹೊಸ ಹೆಜ್ಜೆಗಳು

ಕನ್ನಡ ಪತ್ರಿಕೋದ್ಯಮವು ಬೆಳೆಯುತ್ತಿದೆ, ಇನ್ನೂ ಬೆಳೆಯಬೇಕಾಗಿದೆ. ಅದರ ಇತಿಹಾಸವು ಭಾರತದ ಪತ್ರಿಕೋದ್ಯೋಗದ ಇತಿಹಾಸದಂತೆಯೇ ಮಹತ್ವವಾದುದು ಮತ್ತು ಚರಿತ್ರಪೂರಿತವಾದುದು. ದೇಶಾಭಿಮಾನಿಗಳಾದ ಮಹಾ ಮಹಾ ಪುರುಷರು ತಮ್ಮ ತನುಮನಧನಗಳನ್ನು ಅರ್ಪಿಸಿ ಪತ್ರಿಕೋದ್ಯಮವನ್ನು ಬೆಳಸಿದ್ದಾರೆ.

ಈಗಿನ ಕಾಲದಲ್ಲಿ ಪತ್ರಿಕೋದ್ಯಮವು ತನ್ನದೇ ಆದ ವೈಶಿಷ್ಟ್ಯದಿಂದ ಕೆಲಸಗಾರರನ್ನು ಆಕರ್ಷಿಸಿದೆ. ಹಿಂದಿನ ಕಾಲದಂತೆ ಎಲ್ಲರೂ ಎಲ್ಲ ಸೇವೆಗಳನ್ನೂ ಮಾಡಲು ಸಾಧ್ಯವಿಲ್ಲ. ಇದು ಪೃಥಕ್ಕರಣದ ಕಾಲ. ಇಂದಿನ ಪತ್ರಿಕೋದ್ಯೋಗಿಯು ೨೪ ಗಂಟೆಯೂ ಪತ್ರಿಕೋದ್ಯೋಗಿಯಾಗಿಯೇ ಆಗಿರಬೇಕಾಗಿದೆ. ಇತರ ಕ್ಷೇತ್ರಗಳಿಗೆ ಕಾಲಿಡಲು ಅವಕಾಶವಿಲ್ಲ.

ಪತ್ರಿಕಾ ಕ್ಷೇತ್ರವು ಬಹಳ ವಿಸ್ತಾರವಾಗಿ ಬೆಳೆದಿದೆ. ಅದು ಒಂದು ಉದ್ಯಮ, ವ್ಯಾಪಾರ, ವ್ಯವಹಾರ ಆಗಿದೆ. ಪತ್ರಿಕಾಕ್ಷೇತ್ರದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಸಮಸ್ಯೆಗಳು ಮಥಿತವಾಗುತ್ತವೆ. ಎಲ್ಲಾ ಪಕ್ಷಗಳ ಮತ್ತು ದೃಷ್ಟಿಕೋನಗಳ ಸಮರ್ಥನೆಗಳೂ ದೊರೆಯುತ್ತವೆ.. ಸಾಹಿತ್ಯ, ಇತಿಹಾಸ, ತತ್ವಶಾಸ್ತ್ರ, ವಿಜ್ಞಾನ, ಕಲೆ, ಸಂಗೀತ ಎಲ್ಲವುಗಳ ವಿಮರ್ಶೆಯೂ ಪತ್ರಿಕಾ ಕ್ಷೇತ್ರದಲ್ಲಿದೆ.

ಪತ್ರಿಕೆಯ ಬಗೆಗಳು ಬೇರೆ ಬೇರೆ. ದಿನಪತ್ರಿಕೆ, ವಾರಪತ್ರಿಕೆ, ಪಕ್ಷಪತ್ರಿಕೆ, ಮಾಸಪತ್ರಿಕೆ, ತ್ರೈಮಾಸಿಕ ಇತ್ಯಾದಿ. ಈ ಪೈಕಿ ದಿನಪತ್ರಿಕೆ ಮತ್ತು ವಾರಪತ್ರಿಕೆಗಳು ಸಾಮಾನ್ಯವಾಚಕನ ಆಕರ್ಷಣೆಗೆ ಪಾತ್ರವಾದವು. ದಿನಪತ್ರಿಕೆಯ ರೀತಿಯೇ ಬೇರೆ, ವಾರಪತ್ರಿಕೆಯ ರೀತಿಯೇ ಬೇರೆ. ದಿನಪತ್ರಿಕೆಗೆ ರೀತಿ ನೀತಿಗಳುಂಟು. ಸುದ್ದಿ ಸಮಾಚಾರಗಳ ಪ್ರಕಟನೆಯಲ್ಲಿಯೂ ಒಂದು ವಿಧಾನ, ರೀತಿ ಉಂಟು. ದಿನಪತ್ರಿಕೆಗಳು ವಿವಿಧ ರಾಜಕೀಯ ಗುರಿ ಮತ್ತು ಪಂಥ ಹೊಂದಿವೆ. ಆದರೆ ಒಟ್ಟನಲ್ಲಿ ಸಾಮಾನ್ಯ ಮನುಷ್ಯನ ಹೃದಯ ಪ ಮನಸ್ಸನ್ನು ಪ್ರತಿಬಿಂಬಿಸಿ ಅದನ್ನು ರೂಪುಗೊಳ್ಳಿ ಸಲುವಾಗಿಯೇ ದಿನಪತ್ರಿಕೆಯ ಕಾರ್ಯಗಳು ವಿ ಹೊಂದುತ್ತವೆ.

ವಾರಪತ್ರಿಕೆಗಳು ದಿನಪತ್ರಿಕೆಗಳಂತೆಯೇ ಪ ಪಂಥದವು. ಪಕ್ಷಪತ್ರಿಕೆಗಳು, ಮಾಸಪತ್ರಿಕೆ ಇವೆಲ್ಲವೂ ಕಲೆ, ಸಾಹಿತ್ಯ, ವಿಜ್ಞಾನ, ಉದ್ಯೋ ಕೈಗಾರಿಕೆ ಮುಂತಾದ ವಿಶೇಷ ಗುರಿ ಹೊಂದಿವೆ.

ಈಚೆಗೆ ಸಿನೆಮಾಪತ್ರಿಕೆಗಳು ಪ್ರಬಲವಾಗಿವೆ. ಸಿನ ಕಲೆ ಮತ್ತು ಕೈಗಾರಿಕೆಗಳಿಗೆ ಪ್ರೋತ್ಸಾಹಕವಾಗಿ

ಕನ್ನಡ ಪತ್ರಿಕೆಗಳ ಭಾಷೆಯೂ ಪರಿವರ್ತನೆ ಹೊ ತ್ತಿದೆ. ಹೊಸ ಹೊಸ ಭಾವನೆಗಳು ಹೊಸ ಹೊಸ ಗಳು, ಹೊಸ ಶೈಲಿ, ಹೊಸ ಮಾತು, ಎಲ್ಲವೂ ದಾಗುತ್ತಿದೆ. ಇಂದಿನದು ನಾಳೆಗಿಲ್ಲ. ಹಿಂದಿ ಇಂದಿಗಿಲ್ಲ. ಪರಿವರ್ತನೆಯ ಮೂಸೆಯಲ್ಲಿ ಕ ವಾಣಿಯು ನೂತನ ನವೀನತೆಯನ್ನು ಹೊಂದುತ್ತಿ

ಕನ್ನಡದಲ್ಲಿ ಒಳ್ಳೆಯ ತಿಳಿಹಾಸ್ಯ ವಾಹಿ ಹರಿಯುತ್ತಿರುವದು ಶುಭ ಸೂಚನೆ. ಹೊಸ ಕನ್ನ ಹಾಸ್ಯ ಕನ್ನಡ ಹೃದಯವನ್ನು ರಮಿಸುತ್ತಿದೆ.

ಕನ್ನಡ ಪತ್ರಿಕೋದ್ಯಮಿಗಳ ತಂಡವು ಬೆಳೆಯು ಉತ್ಸಾಹಿಗಳು, ಕುಶಲರು, ಸೃಷ್ಟಿಕರ್ತರು ಕನ್ನಡ ಕೋದ್ಯಮದಲ್ಲಿದ್ದಾರೆ. ಯುವಕರು, ಪ್ರಗತಿಶೀ ಕ್ರಾಂತಿಕಾಮಿಗಳು ಕನ್ನಡ ರಥವನ್ನು ಮುಂದ ತ್ತಿದ್ದಾರೆ.

ನವ ಭಾರತದ ನವೋದಯದಲ್ಲಿ ಕನ್ನಡ ಪತ್ರಿ ದ್ಯಮವು ಆಶಾದಾಯಕವಾಗಿ ಮುಂದಡಿಯಿಡು ಕನ್ನಡ ನಾಡಿನ ಹೊಸ ಬದುಕಿನ ಜೀವಾಳವೇ ಪತ್ರಿಕೋದ್ಯಮ. ಕನ್ನಡ ಜನತೆಯು ಕನ್ನಡ ಪತ್ರಿ ದ್ಯಮವನ್ನು ಲಾಲಿಸಿ ಪೋಷಿಸಲಿ.

ಪಿ. ಆರ್. ರಾವ

# ವೀರಶೈವ ಆಚಾರ್ಯತ್ರಯದ ಕಾಲ

ವೀರಶೈವರ ಕೊನೆಯ ಐನೆಯ ಆಚಾರ್ಯನಾದ ವಿಶ್ವಾರಾಧ್ಯನ ಕಾಲವಿಚಾರದ ಪ್ರಶ್ನೆಯನ್ನು ಸದ್ಯಕ್ಕೆ ಒತ್ತಟ್ಟಗಿಟ್ಟು ಮಿಕ್ಕ ನಾಲ್ವರಲ್ಲಿ ಮೊತ್ತಮೊದಲಿನ ರೇವಣಸಿದ್ಧನ ಕಾಲವನ್ನು ಅನ್ಯತ್ರ[೧] ನಿಶ್ಚಯಿಸಿರುವುದರಿಂದ, ಇನ್ನುಳಿದ ಮರುಳಸಿದ್ಧ, ಏಕೋರಾಮಿ ತಂದೆ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯರೆಂಬ ಈ ಆಚಾರ್ಯತ್ರಯದ ಕಾಲವನ್ನು ಇಲ್ಲಿ ವಿಚಾರಿಸುವ.

## ೧

ಈ ಮೂವರಲ್ಲಿ ಸಿದ್ಧಲಿಂಗನೂ ಎಂಬ ಮರುಳಸಿದ್ಧನನ್ನು ಕುರಿತು ದೇಪ ಅಥವಾ ದೇವಕವಿ ಸಿದ್ಧಲಿಂಗ ಚಾರಿತ್ರವೂ ಎಂಬ ಮರುಳಸಿದ್ಧ ಚಾರಿತ್ರವನ್ನು[೨] ವಾರ್ಧಕ ಷಟ್ಪದಿಯಲ್ಲಿ ರಚಿಸಿರುತ್ತಾನೆ. ಅದರಲ್ಲಿ ಹೇಳಿರುವಂತೆ (ಸಂಧಿ ೬) ಆ ಕಾವ್ಯವು

> ಶಾಲಿವಾಹನ ಶಕಂ ಸಾಗುತಿರೆ ಸಾವಿರದ
> ಮೇಲೆ ಐನೂರ ಒಂಬತ್ತನೆಯ ಸರ್ವಜಿತು ಸಂವತ್ಸ
> ರೆಂದೆನಿಸುವ ।
> ಕಾಲದೊಳು ವೈಶಾಖ ಶುದ್ಧ ಪೌರ್ಣಮಿಯೊಳಾ
> ವೇಳೆಯೊಳು ಜೀವವಾಸರದ ಶುಭತಿಥಿಯೊಳಗೆ

ಅಂದರೆ ಶಾಲಿವಾಹನ ಶಕ (ಶಾ. ಶ.) ೧೫೦೯ ಸರ್ವಜಿತು ಸಂ॥ (ನಿಜ) ವೈಶಾಖ ಶುದ್ಧ ೧೫ ಜೀವ (=ಗುರು)ವಾರ =ಕ್ರಿಸ್ತ ಶಕ (ಕ್ರಿ. ಶ.) 1587 ಮೇ 11ನೆಯ ತಾರೀಕು ಗುರುವಾರ ರಚಿತವಾಯಿತು. ಅದರಲ್ಲಿ ಮರುಳಸಿದ್ಧನ ಕಥೆಯನ್ನು ಹೀಗೆ ಹೇಳಿದೆ—

ಪರಶಿವನ ಆಜ್ಞೆಯ ಮೇರೆಗೆ ಚರಮೂರ್ತಿಯೊಬ್ಬನು ಕಗ್ಗಲ್ಲಪುರದ[೩] ಮಾದಿಗ ಕೂಚಿಮಾರನಿಗೆ ಮಗನಾಗಿ ಹುಟ್ಟಿದನು. ಆತನು ಹುಟ್ಟುತ್ತಲೆ ಆತನ ತಾಯಿ ಮಗುವನ್ನು ರಾಜಮಾರ್ಗದಲ್ಲಿ ಮಡಗಿ ಅಲ್ಲಿಗೆ ತನ್ನ ಶಾಪ ತೀರಿದುದರಿಂದ ತಾನು ಹೊರಟುಹೋದಳು. ತಂದೆ ಸತ್ತನು (ಸಂಧಿ ೨). ಕೂಚಿಮಾರನ ಒಡೆಯನಾದ ಬಾಚಿಗೌಡನು ಆ ಮಗುವನ್ನು ಕಂಡು ಅದನ್ನು ತಂದು ತನ್ನ ಮಡದಿಯಾದ ಮಲ್ಲಮ್ಮನಿಗಿತ್ತನು. ಅವರು ಸಾಕಿ ಬೆಳಸಿದ ಆ ಮಗುವೇ ಮರುಳಸಿದ್ಧ. ಮರುಳನು ತನ್ನ ಎಳವೆಯಲ್ಲಿ ಕರುಗಳನ್ನು ಕಾವ ಕಾಯಕದಲ್ಲಿದ್ದು ಆಗಲೇ ಕರುಗಳ ಪವಾಡ, ಕರುಗಾಹಿಗಳ ಪವಾಡ, ಎಳ್ಳು ಪವಾಡ, ಸೌದೆಬಂಡಿಯ ಪವಾಡ ಮೊದಲಾದ ಹಲವು ಪವಾಡಗಳನ್ನು ಮೆರಸಿದ್ದನು. ಆಮೇಲೆ ಒಮ್ಮೆ ಆ ಹಳ್ಳಿಯವರು ಪೈರು ಹುಲುಸಾಗಲೆಂದು ಬಾಚಿಗೌಡನ ಒಪ್ಪಿಗೆಯಿಂದ ಮಾರಿಹಬ್ಬವನ್ನು ಆಚರಿಸಲು, ಮರುಳನು ಅದನ್ನೊಲ್ಲದೆ ಇನ್ನು ಆ ಮನೆಯಲ್ಲಿ ಇರಬಾರದೆಂದು ಕಂಥೆಯನ್ನು ಹೊದ್ದು ಅಲ್ಲಿಂದ ಹೊರಟು ಬೇತೂರಿಗೆ ಹೋಗಿ, ಅಲ್ಲಿ ಬ್ರಾಹ್ಮಣರ ಯಾಗವನ್ನು ಕೆಡಿಸಿ, ಅವರು ನೊಣಬ ಚಕ್ರೇಶ್ವರನಲ್ಲಿ ದೂರಿಡುತ್ತಲೆ ಆ ರಾಜನು ತನ್ನನ್ನು ಮದ್ದಾನೆಯ ಮುಂದೆ ನೂಕಿಸಲು ಆ ಆನೆಯನ್ನು ನಿಗ್ರಹಿಸಿ, ಅಲ್ಲಿಂದ ಮುನ್ನಡೆದು ಬಲ್ಲಾಳ ನೃಪನ ನೆಲೆವೀಡಾದ ಹಳೇಬೀಡು ಎಂಬ ಪುರವರಕ್ಕಾದನು. ಅಲ್ಲಿ ಮಳೆಯ ಪವಾಡವನ್ನು ಮೆರಸಿ ಅಲ್ಲಿಂದ ಮುಂದೆ ಹೋಗಿ ಚಿನ್ಮನಗಿರಿ[೪] ಎಂಬಲ್ಲಿಗೆ ಬಂದನು (ಸಂಧಿ ೩). ಅಲ್ಲಿ ರೇವಣಸಿದ್ಧನು ಮರುಳನಿಗೆ ಪಂಚಾಕ್ಷರಿಯನ್ನು ಉಪದೇಶಿಸಿ ತನ್ನ ಶಿಷ್ಯನನ್ನಾಗಿಸಿಕೊಂಡು, ಉತ್ತರ ದಿಕ್ಕಿನ ಕೊಲ್ಲಾಪುರದಲ್ಲಿ ಮಾಯೆ ನೆಲಸಿರುತ್ತಾಳೆ, ಅಲ್ಲಿಗೆ ಮಾತ್ರ ಹೋಗದೆ ಮತ್ತೆಲ್ಲಿಗೂ ಹೋಗೆಂದು ಆಜ್ಞಾಪಿಸಲು, ಹಾಗಾದರೆ ನಿನ್ನ ಪದವಿಡಿದು ಅಲ್ಲಿಗೇ ಹೋಗುವೆನು, ಆಕೆಯ ಬಲುಹು ಹೇಗಿದೆ ಎಂದು ನೋಡಿಯೇ ಬಿಡುವೆನೆಂದು ಮರುಳಸಿದ್ಧನು ರೇವಣಸಿದ್ಧನನ್ನು ಬೀಳ್ಕೊಂಡು, ಬಣ್ಣಗುಂದಿದ ಮೈ, ಬಡವಾದ ಒಡಲು, ಗುಣಿದ ಕಣ್ಣು, ಮುರುಟಿದ ಕಿವಿ, ಕೋರೆ ಮೂಗು, ಜೋಲ್ವಾಯಿ, ಹುಳಬಿದ್ದ ಹುಣ್ಣುಗಳು, ಸಣ್ಣಿಸಿದ ಕೈಕಾಲುಗಳು ಉಳ್ಳ ಅಸಹ್ಯವಾದ

---

೧. ಶರಣಸಾಹಿತ್ಯ VIII ಸಂಚಿಕೆ ೨–೩ (1945, ಏಪ್ರಿಲ್–ಮೇ), ೫ (ಜುಲಾಯಿ) ಮತ್ತು ೬ (ಆಗೋಸ್ತು).

೨. ಈ ಮರುಳಸಿದ್ಧ ಕಾವ್ಯವು ಇತ್ತೀಚೆ (1945) ಶ್ರೀ॥ ಅ. ನ. ಕೃಷ್ಣರಾಯರಿಂದ ಸಂಪಾದಿತವಾಗಿ ಪ್ರಕಟಿಸಲ್ಪಟ್ಟಿದೆ.

೩. ಈ ಊರು ಬಳ್ಳಾರಿ ಜಿಲ್ಲೆಯ ಕೂಡಲಿ ತಾಲ್ಲೂಕಿನಲ್ಲಿ ಉಜ್ಜಯಿನಿಗೆ ಸುಮಾರು ೩ ಮೈಲು ದೂರದಲ್ಲಿದೆ (ಮರುಳಸಿದ್ಧ ಕಾವ್ಯ, ಪೀಠಿಕೆ ಪುಟ ೧೨ ಮತ್ತು ೧೪). ಆದರೆ ಮರುಳಸಿದ್ಧನ ಹುಟ್ಟೂರು ಉದಯಪುರ, ಅಂದರೆ ಧಾರವಾಡ ಜಿಲ್ಲೆಯ ಹಾನಗಲ್ಲ ತಾಲ್ಲೂಕಿನ ಅಕ್ಕಿಆಲೂರಿನ ಬಳಿಯಣ ಮೂಡೂರು ಎಂದೂ ಪ್ರತೀತಿ ಇದೆ. (ಶ್ರೀ ಮಲ್ಲಿಕಾರ್ಜುನ ದೇಶಿಕರ 'ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ', ಪು. ೬).

೪. ದಾವಣಗೆರೆ ನಂ. 164ನೆಯ ಶಾಸನದಲ್ಲಿ (*Epigraphia Carnatica XI*) ಚಿತ್ರದುರ್ಗದ ರಾಜಧಾನಿಯನ್ನು 'ಚಿನ್ಮನಗಿರಿದುರ್ಗ' ಎಂದಿರುವುದರಿಂದ, ಚಿನ್ಮನಗಿರಿ ಎಂದರೆ ಮೈಸೂರು ರಾಜ್ಯದ ಚಿತ್ರದುರ್ಗ.

ಒಂದು ರೂಪವನ್ನಾಂತು, ರಾಮಿ (ರಾಯಿ ?) ಸೆಟ್ಟಿಯ ಕೆರೆಯಪುರಕ್ಕೆ ಬಂದು ಅಲ್ಲಿ ರಾಮಯ್ಯನಿಗೆ ಕಾಣಿಸಿ ಕೊಳ್ಳುತ್ತಲೆ ರಾಮಯ್ಯನು ಆತನನ್ನು ತಲೆಯಮೇಲೆ ಹೊತ್ತುಕೊಂಡು ತನ್ನ ಮಠಕ್ಕೆ ಒಯ್ದು ಗುರುಗದ್ದುಗೆ ಯಲ್ಲಿ ಕುಳ್ಳಿರಿಸಿ ಆತನಿಗೆ ಭೋಜನವಮಾಡಿಸಿದನು. ಅಂದಿ ನಿಂದ ಆ ರಾಮಯ್ಯನಿಗೆ ಗದ್ದುಗೆಯ ರಾಮಯ್ಯನೆಂದು ಹೆಸರಾಯಿತು. ಅಲ್ಲಿಂದೆದ್ದು ಮರುಳಸಿದ್ಧನು ಕೊಲ್ಲಾ ಪುರದ ದಾರಿಹಿಡಿದು, ಗುಂಡಯ್ಯ, ಬೊಮ್ಮಯ್ಯಗಳ ನೆಲೆಯನ್ನು ನೋಡುತ್ತ 'ರುದ್ರರಾಯನ ಪಿತನು ಗಣಪತಿಯ ದೇಶ'ವಾದ ಓರುಗಲ್ಲಿಗೆ ಹೋಗಿ ಅಲ್ಲಿ ಅವರನ್ನು ಕಂಡು, ಮುಂದೆ ಸಾಗುತ್ತ ಕೊಲ್ಲಾಪುರಕ್ಕೆ ನಡೆತಂದನು. ಕೊಲ್ಲಾಪುರದಲ್ಲಿ ಆತನು ಭಿಕ್ಷುಕನಾಗಿ ಕರಪಾತ್ರೆ ಹಿಡಿದು ಅಲ್ಲಿಯ ಅರಸನಾದ ಕರಟನ[೫] ಅರಮನೆಯನ್ನು ಹೊಕ್ಕು, ಮಾಯೆ ತನಗೆ ನೀಡಿದ ವಿಷ ವೆಲ್ಲವನ್ನು ಉಂಡು, ಆಕೆಯ ಮೂಗನ್ನು ತರಿದು ಕರಟ ನೊಡನೆ ಕಾದಾಡಿ ಅವನನ್ನು ಕೊಂದನು (ಸಂಧಿ ೪). ಅನಂತರ ಮರುಳಸಿದ್ಧನು ತೆಲುಗುಬಾಳಿಗೆ[೬] ಹೋಗಿ ಅಲ್ಲಿ ಒಕ್ಕಲಿಗ ಸಿದ್ಧನನ್ನು ಕರುಣಿಸಿ, ಅಲ್ಲಿಂದ ಮುಂದೆ ಹೋಗಿ ತನ್ನ ಗುರುವಾದ ರೇವಣಸಿದ್ಧನನ್ನು[೮] ಕಂಡು ಕೊನೆಗೆ ಕಗ್ಗಲ್ಲಪುರದ ಹತ್ತಿರದ ಉಜ್ಜನಿ (ಉಜ್ಜಯಿನಿ) ಎಂಬ ಕೇತನಹಳ್ಳಿಯ[೭] ಮಧ್ಯದ ಕಾಡೇ ತನಗೆ ಹಿತಕರ ವೆಂದು ಬಗೆದು ಅಲ್ಲಿಯೇ ಸಮಾಧಿ ಹೊಂದಿದನು (ಸಂಧಿ ೫).

ಇದರಿಂದ ಈ ಮೂರು ಐತಿಹಾಸಿಕ ಹಾಗೂ ಸಮ ಸಾಮಯಿಕ ವಿಷಯಗಳು ಬಯಲಾಗುತ್ತವೆ—

(೧) ಮರುಳಸಿದ್ಧನು ಹಳೇಬೀಡಿಗೆ ಹೋಗಿ ಬಲ್ಲಾಳ ನೃಪನನ್ನು ಕಂಡನು (ಸಂಧಿ ೩, ಪದ್ಯ ೧೦೩, ೧೨೪, ೧೮೭);

(೨) ಆತನು ರೇವಣಸಿದ್ಧನ ಶಿಷ್ಯನಾದನು (ಸಂಧಿ ೬, ಪದ್ಯ ೧–೧೪);

(೩) ಆತನು 'ರುದ್ರರಾಯನ ಪಿತನು ಗಣಪತಿಯ ದೇಶ'ವಾದ ಓರುಗಲ್ಲಿಗೆ ಹೋದನು (ಸಂಧಿ ೪, ಪದ್ಯ ೪೧, ೪೨), ಅಂದರೆ ರುದ್ರರಾಯನ ತಂದೆಯಾದ ಗಣಪತಿ ಎಂಬ ಅರಸನು ಆಗ್ಗೆ ಆಳುತ್ತಿದ್ದ ಓರುಗಲ್ಲಿಗೆ ಹೋದನು.

ಈ ಮೂವರಲ್ಲಿ ರೇವಣಸಿದ್ಧನು ಐತಿಹಾಸಿಕ ಪುರುಷ ನೆಂದೂ ಕ್ರಿ. ಶ. ಸು. 1095ರಲ್ಲಿ ಹುಟ್ಟಿ ಸು. 1190ರ ವರೆಗೆ ಬದುಕಿದ್ದನೆಂದೂ ನಾನು ಅನ್ಯತ್ರ[೯] ನಿರ್ಣಯಿಸಿ ದ್ದೇನೆ. ಆ ರೇವಣಸಿದ್ಧನ ಕಾಲಕ್ಕೆ ಸರಿಗೂಡುವ ಹಳೇ ಬೀಡಿನ ಬಲ್ಲಾಳ ನೃಪನೆಂದರೆ ಕ್ರಿ. ಶ. 1173 ರಿಂದ 1220ರ ವರೆಗೆ ಆಳಿದ ಹೊಯ್ಸಳ II ವೀರಬಲ್ಲಾಳ; ಓರುಗಲ್ಲಿನ 'ರುದ್ರರಾಯ'ನೆಂದರೆ ರುದ್ರಮಹಾರಾಜ ಎಂದು ಗಂಡು ಹೆಸರಾಂತು ಕ್ರಿ. ಶ. 1260 ರಿಂದ 1291ರ ವರೆಗೆ ಓರುಗಲ್ಲಿನಲ್ಲಿ ಆಳಿದ ಕಾಕತೀಯ ವಂಶದ ರುದ್ರಮ್ಮ ಎಂಬ ರಾಣಿ, ಅವಳ 'ಪಿತನು ಗಣಪತಿ' ಎಂದರೆ ಅವಳ ಹಿಂದೆಯೇ ಕ್ರಿ. ಶ. 1199 ರಿಂದ 1260ರ ವರೆಗೆ ಓರುಗಲ್ಲಿನಲ್ಲಿ ಆಳಿದ ಆಕೆಯ ತಂದೆಯಾದ ಗಣಪತಿ ಎಂಬ ಅರಸನು; ಅತಏವ ಮರುಳಸಿದ್ಧನು ಓರುಗಲ್ಲಿಗೆ ಹೋದಾಗ ಅಲ್ಲಿ ಗಣಪತಿ ಆಳುತಿದ್ದನೆಂದು ವ್ಯಕ್ತವಾಗುತ್ತದೆ.

ಮರುಳಸಿದ್ಧನದೇ ಎಂದು ತಿಳಿದುಬರುವ—

ಆಲಿಸುವ ಶ್ರವಣವು ಮೇಲೆ ಆಕಾಶವನಡರಲು ಉಲುಹ ನಿರ್ಭೂತ ಚಿತ್ತ ಸಮಾಧಾನವೆಯ್ದಲು ಕಾಲಕರ್ಮಭವಂಗ ಗೆಲುವುದಿದೇನು ಸೋಜಿಗವು ಹೇಳಾ ರೇವಣ್ಣಪ್ರಭುವೇ

ಎಂಬ ಈ ವಚನದಲ್ಲಿಯ 'ರೇವಣ್ಣ ಪ್ರಭುವೇ' ಎಂಬ ಅಂಕಿತದಿಂದ ಆತನು ರೇವಣಸಿದ್ಧನ ಶಿಷ್ಯನಾಗಿರ ಬೇಕೆಂದು ಸಿದ್ಧವಾಗುತ್ತದೆ.

ಕ್ರಿ. ಶ. ಸು. 1150ರಷ್ಟಕ್ಕೆ ಹುಟ್ಟಿ ಕ್ರಿ. ಶ. ಸು.

---

೫. ಮರುಳಸಿದ್ಧನ ಕಾಲದಲ್ಲಿ ಕೊಲ್ಲಾಪುರದಲ್ಲಿ ಕರಹಾಟ ಅಥವಾ ಕರ್ಹಾಡದ ಶಿಲಾಹಾರ ವಂಶದ ಅರಸರು ಆಳುತ್ತಿದ್ದರು; ಈ ಅರಸ ನನ್ನು (ಕ ಹಾಟ=) ಕರಟ ಎಂದಿರಬಹುದು. ಚಾಳುಕ್ಯ ತ್ರಿಭುವನ ಮಲ್ಲ VI ವಿಕ್ರಮಾದಿತ್ಯನ (ಕ್ರಿ. ಶ. 1076–1126) ಹೆಂಡಂದಿರಲ್ಲಿ ಒಬ್ಬಳಾದ ಕೊಲ್ಲಾಪುರದ ಕರಹಾಟ (ಕರ್ಹಾಡ) ಶಿಲಾಹಾರ ರಾಜಪುತ್ರಿಯನ್ನು ಬಿಲ್ಹಣನ 'ವಿಕ್ರಮಾಂಕದೇವ ಚರಿತ'ದಲ್ಲಿ (VIII ೨) 'ಕರಹಾಟಪತೇಃ ಪುತ್ರೀ' ಎಂದಿರುವುದನ್ನು ಇಲ್ಲಿ ನೆನವರಿಸಬಹುದು.

೬. ಈ ತೆಲುಗುಬಾಳು ಎಂಬ ಊರು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿದೆ (ಮರುಳಸಿದ್ಧ ಕಾವ್ಯ, ಪೀಠಿಕೆ ಪು. ೧೨).

೭. ಈ ಊರು ಬಳ್ಳಾರಿ ಜಿಲ್ಲೆಯ ಕೂಡಲಿ ತಾಲ್ಲೂಕಿನಲ್ಲಿದೆ (ಅದೇ, ಪೀಠಿಕೆ ಪು. ೧೨).

೮. ರೇವಣಸಿದ್ಧನು ಕ್ರಿ. ಶ. ಸು. 1190 ರೊಳಗೆ ಗತಿಸಿದನೆಂಬುದರಿಂದ ಮರುಳಸಿದ್ಧನು ಕ್ರಿ. ಶ. 1199ರಲ್ಲಿ ಪಟ್ಟವೇರಿದ ಗಣಪತಿರಾಯನ ಓರುಗಲ್ಲಿ ನಿಂದ ಮರಳುವಾಗ ರೇವಣಸಿದ್ಧನನ್ನು ಕಂಡನೆಂದಿರುವಲ್ಲಿ ಕಾಲಕ್ರಮ ಎಡವಟ್ಟಾಗುತ್ತದೆ.

೯. ಪ್ರಬುದ್ಧ ಕರ್ಣಾಟಕ XIX (ಈಶ್ವರ ಸಂ. ೧), ವಿನಾಯಕ ಸಂಚಿಕೆ ಪು. ೧೯.

೧೨೩೦—೧೨೩೫ರಲ್ಲಿ ಶಿವೈಕ್ಯನಾದ ಹರಿಹರನು[೧೦] ಆದಯ್ಯನ ಮೇಲೆ ಒಂದು ರಗಳೆಯನ್ನು ಬರೆದಿರುತ್ತಾನೆ. ಅತಏವ ಬಸವೇಶ್ವರನನ್ನು ಹೆಸರಿಸಿರುವ ಹಾಗೂ ಅವನ ಕಿರಿಯ ಸಮಕಾಲೀನನಾದ ಆದಯ್ಯನು ಕ್ರಿ. ಶ. ಸು. 1210 ರೊಳಗೆ ಕಾಲವಾಗಿರಬೇಕು. ಆದಯ್ಯನ ಈ ೨ ವಚನಗಳಲ್ಲಿ[೧೧] 'ಮರುಳಸಿದ್ಧಯ್ಯ ದೇವರ ಅದೃಷ್ಟ ಪ್ರಸಾದನಿಷ್ಠೆ' ಹಾಗೂ 'ಮರುಳಸಿದ್ಧ ದೇವರೆನ್ನ ಶ್ರೋತ್ರ' ಎಂಬಲ್ಲಿ ಮರುಳಸಿದ್ಧನ ಹೆಸರಿದೆ—

ಬಸವಣ್ಣನ ಭಕ್ತಿಸ್ಥಲ, ಮಡಿವಾಳ ಮಾಚಣ್ಣನ ಮಹೇಶ್ವರ ಸ್ಥಲ, ಘಟ್ಟಿವಾಳ ಮುದ್ದಣ್ಣನ ಪ್ರಸಾದಿಸ್ಥಲ, ಚೆನ್ನಬಸವಣ್ಣನ ಪ್ರಾಣಲಿಂಗಸ್ಥಲ, ಪ್ರಭುವಿನ ಶರಣಸ್ಥಲ, ಸೊಡ್ಡಳ ಬಾಚರಸನ ಐಕ್ಯಸ್ಥಲ, ಅಜಗಣ್ಣನ ಆರೂಢ, ನಿಜಗುಣನ ನಿಬ್ಬೆರಗು, ಅನುಮಿಷನ ನಿಶ್ಚಲ, ಮಹಾದೇವಿಯಕ್ಕನ ಜ್ಞಾನ, ನಿಂಬಿಯಕ್ಕನ ಜ್ಞಾನನಿಶ್ಚಯ, ಮುಕ್ತಾಯಕ್ಕನ ಅಕ್ಕರು, ಸತ್ಯಕ್ಕನ ಯುಕ್ತಿ, ಅಲ್ಲಾಳಿಯಕ್ಕನ ಸಮತೆ, ರೇವಣಸಿದ್ಧಯ್ಯ ದೇವರ ನಿಷ್ಠೆ, ಸಿದ್ಧರಾಮ ತಂದೆಗಳ ಮಹಿಮೆ, ಮರುಳಸಿದ್ಧಯ್ಯ ದೇವರ ಅದೃಷ್ಟ ಪ್ರಸಾದನಿಷ್ಠೆ, ಏಕೋರಾಮಯ್ಯಗಳ ಆಚಾರನಿಷ್ಠೆ, ಪಂಡಿತಾರಾಧ್ಯನ ಸ್ವಯಂಪಾಕ, ಮುಗ್ಧ ಸಂಗಯ್ಯ, ಮೈದುನ ರಾಮಣ್ಣ, ಬೇಡರ ಕನ್ನಪ್ಪ, ಕೋಳೂರು ಕೊಡಗೂಸು, ತಿರುನೀಲಕ್ಕರು, ರುದ್ರಪಶುಪತಿಗಳು, ದೀಪದ ಕಲಿಯರು ಮೂಢಭಕ್ತಿ ಎನ್ನೊಳಗೆಂದಪ್ಪುದೊ ಸೌರಾಷ್ಟ್ರ ಸೋಮೇಶ್ವರಾ (ವಚನ ೩೯)

ಬಸವಣ್ಣನೆನ್ನ ಅಂಗ, ಮಡಿವಾಳನೆನ್ನ ಮನ, ಪ್ರಭು ಎನ್ನ ಪ್ರಾಣ, ಚೆನ್ನಬಸವಣ್ಣನೆನ್ನ ಕರಸ್ಥಲದ ಲಿಂಗ, ಘಟ್ಟಿವಾಳನೆನ್ನ ಭಾವ, ಸೊಡ್ಡಳ ಬಾಚರಸನೆನ್ನ ಅರಿವು, ಮಹಾದೇವಿಯಕ್ಕನೆನ್ನ ಜ್ಞಾನ, ಮುಕ್ತಾಯಕ್ಕನೆನ್ನ ಅಕ್ಕರು, ಸತ್ಯಕ್ಕನೆನ್ನ ಯುಕ್ತಿ, ನಿಂಬಿಯಕ್ಕನೆನ್ನ ನಿಶ್ಚಯ, ಅಲ್ಲಾಳಿಯಕ್ಕನೆನ್ನ ಸಮತೆ, ಅನುಮಿಷನೆನ್ನ ನಿಶ್ಚಲ, ನಿಜಗುಣನೆನ್ನ ಕ್ಷಮೆ, ರೇವಣಸಿದ್ಧೇಶ್ವರನೆನ್ನ ಸ್ತೋತ್ರ, ಸಿದ್ಧರಾಮ ತಂದೆಗಳೆನ್ನ ನೇತ್ರದ ದೃಕ್ಕು, ಮರುಳಸಿದ್ಧೇಶ್ವರ ದೇವರೆನ್ನ ಶ್ರೋತ್ರ, ಪಂಡಿತಾರಾಧ್ಯರೆನ್ನ ಜಿಹ್ವೆ, ಏಕೋರಾಮ ತಂದೆಗಳೆನ್ನ ನಾಸಿಕ, ಅಸಂಖ್ಯಾತರೆನ್ನ ಅವಯವ, ಪುರಾತರೆನ್ನ ಪುಣ್ಯದ ಪುಂಜ, ಏಳುನೂರೆಪ್ಪತ್ತು ಅಮರಗಣಂಗಳೆನ್ನ ಗತಿಮತಿ, ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರ ಪಡಿತೊತ್ತಯ್ಯ. (ವಚನ ೪೦)

ಕರ್ಣಾಟಕ ಕವಿಚರಿತೆಯಲ್ಲಿ[೧೨] ಕ್ರಿ. ಶ. ಸು. 1160 ರಲ್ಲಿ ರಚಿತವಾಗಿರಬೇಕೆಂದು ಹೇಳಿರುವ ಶ್ರೀಪತಿ ಪಂಡಿತನ ಶ್ರೀಕರಭಾಷ್ಯದಲ್ಲಿಯೂ ಮರುಳಸಿದ್ಧನ ಹೆಸರಿದೆ—

ಸಮ್ಯಗ್ರೇವಣದೇಶಿಕೇಂದ್ರ ಧೃತ ಷಡ್ಲಿಂಗಾವಧಾನೋಜ್ಜ್ವಲಂ
ಸಿದ್ಧಾರ್ಯಂ ಮರುಳಪ್ರಭುಂ ಬುಧನುತಂ ತಂ ಮನ್ಮಹೇ
ಶ್ರೇಯಸೇ ॥ ೭ ॥

ಹಾಗಾದರೆ ಇದೆಲ್ಲ ಸಮಸಾಮಯಿಕತೆಗೆ ಅನುರೂಪವಾಗಿ ಮರುಳಸಿದ್ಧನು ಕ್ರಿ. ಶ. ಸು. 1120–25 ರಷ್ಟಕ್ಕೆ ಹುಟ್ಟಿ ಸು. 1205–10 ರೊಳಗೆ ಸಮಾಧಿ ಹೊಂದಿರಬೇಕು.

೨

ಏಕೋರಾಮಿ ತಂದೆಯ ಮೇಲೆ ಹರದಿಹಯಳ್ಳಿ ನಂಜಣಾರ್ಯನ ರಚಿಸಿದ ಏಕೋರಾಮೇಶ್ವರ ಪುರಾಣವೆಂಬ ವಾರ್ಧಕಷಟ್ಪದೀ ಬದ್ಧವಾದ ಕಾವ್ಯವಿದೆ.[೧೩] ಆದರ ರಚನಕಾಲವನ್ನು ಅದರಲ್ಲಿ ಹೇಳಿಲ್ಲ. ಕರ್ಣಾಟಕ ಕವಿಚರಿತದಲ್ಲಿ ಈ ಕಾವ್ಯದ ಹೆಸರಿಲ್ಲ. ಆದರೆ ಇದೇ ಕವಿಯ ಬೇರೊಂದು ಗ್ರಂಥದ ರಚನಕಾಲ ಕ್ರಿ. ಶ. ಸು. 1650 ಎಂದು ಕವಿಚರಿತದಲ್ಲಿ[೧೪] ಹೇಳಿದೆ. ಏಕೋರಾಮೇಶ್ವರ ಪುರಾಣದ ಕಥಾಗರ್ಭ ಹೀಗಿದೆ—

ಪರಮೇಶ್ವರನಿಂದ ಆಜ್ಞಪ್ತನಾದ ಮೇರೆಗೆ ಘಂಟಾಕರ್ಣನೆಂಬ ಪ್ರಮಥನು ಕರ್ಣಾಟಕ ದೇಶದ ಮುದ್ರಾಪುರದಲ್ಲಿದ್ದ[೧೫] ಕಮ್ಮೆಕುಲದ ಶೈವಬ್ರಾಹ್ಮಣನಾದ ರಾಮಭದ್ರಾಚಾರ್ಯನಿಗೆ ಮಗನಾಗಿ ಏಕೋರಾಮನೆಂಬ ಹೆಸರಿನಿಂದ ಜನಿಸಿದನು. ಆತನು ಪ್ರವರ್ಧಮಾನನಾಗಿ ಶಂಖುಕರ್ಣನಿಂದ ವೀರಶೈವ ದೀಕ್ಷೆ ಪಡೆದನು. ಇದನ್ನು ನೋಡಿ ಅಸೂಯಾಪರರಾದ ಪರಸಮಯಿಗಳು ಆ ಊರ ದೊರೆಯಾದ ವೀರಭಾಸ್ಕರರಾಯನಲ್ಲಿ ದೂರು ಹೇಳಲು, ಆತನು ಏಕೋರಾಮನಿಗೆ ಹೇಳಿಕಳಿಸುತ್ತಲೆ ಈತನು ಬಂದು ರಾಜನ ಮುಂದೆ ಅವರ ನುಡಿಯನ್ನು ಹೊಳ್ಳುಗಳೆದು ಅಲ್ಲಿಯ ರಾಮಲಿಂಗವನ್ನು ನುಡಿಸಿದನು. ಆ ಕಾಲದಲ್ಲಿ ಮಲ್ಲಿಕಾರ್ಜುನೇಶ್ವರನು ಗುಪ್ತಸ್ವಯಂಭುವೆನಿಸಿ ತಿರುಮಲೆಯ ರಮಣೀಯ ಸ್ಥಳದಲ್ಲಿ ಮೂರ್ತಿ

---

೧೦. ಶರಣ ಸಾಹಿತ್ಯ II, ಸಂ. ೭–೮ (1939 ಜುಲಾಯಿ-ಆಗೋಸ್ತು) ಪು. ೩೦೬–೩೩೭; ಶರಣ ಸಾಹಿತ್ಯ VIII, ಸಂ. ೬ (ಆಗೋಸ್ತು 1945), ಪು. ೨೫೪–೨೫೫.

೧೧. ಶಿವಾನುಭವ ಗ್ರಂಥಮಾಲೆ (ಬಿಜಾಪುರ): ಆದಯ್ಯನ ವಚನಗಳು, ಪು. ೧೬–೧೭.

೧೨. I, ಪು. 212.

೧೩. ಶರಣ ಸಾಹಿತ್ಯ II, ಸಂ. ೬–೭, ಪು. ೨೧೭–೨೨೯.

೧೪. II, ಪು. 438.

೧೫. ಈ ಮುದ್ರಾಪುರ ಅಥವಾ ಚೆನ್ನಮುದ್ರಾಪುರವೆಂದರೆ ಹೈದರಾಬಾದು ರಾಜ್ಯದಲ್ಲಿಯ ಮುದನೂರು (ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ, ಪು. ೯).

ವೆತ್ತಿರಲು ಅವಿವೇಕಿಗಳಾದ ವೈಷ್ಣವರು ಆ ದಿವ್ಯಲಿಂಗವನ್ನು ಹೂವಿನಲ್ಲಿ ಮರಸಿ ವಿಷ್ಣುವೇ ಆರಾಧ್ಯ ದೈವವೆಂದು ಅರ್ಚಿಸುತ್ತಿದ್ದರು. ಆಗ್ಗೆ ಅಯೋಧ್ಯೆಯಿಂದ ಅಲ್ಲಿಗೆ ಬಂದಿದ್ದ ವೀರವೈಷ್ಣವನಾದ ವ್ಯಾಸನೆಂಬ ಬ್ರಾಹ್ಮಣನು ಏಕೋರಾಮನು ವೈಷ್ಣವರನ್ನೆಲ್ಲಾ ವೀರಶೈವರನ್ನಾಗಿಸುತ್ತಾನೆಂದು ಕೇಳಿ, ಅವನನ್ನು ವಾದದಲ್ಲಿ ಸೋಲಿಸುವೆನೆಂದು ಪಂಥ ತೊಟ್ಟು, ವಿಷ್ಣುವೇ ಪರಬ್ರಹ್ಮವೆಂಬ ಗೋವಿಂದಶಾಸ್ತ್ರದ ಪುಸ್ತಕವನ್ನು ಆನೆಯಲ್ಲಿ ಮೆರವಣಿಗೆ ಮಾಡುತ್ತ ಮುದ್ರಾಪುರಕ್ಕೆ ಬಂದು ಏಕೋರಾಮನನ್ನು ಕಂಡು ಅವನಿಗೆ ಬುದ್ಧಿ ಹೇಳಲಿಕ್ಕೆ ಹೋದನು. ಏಕೋರಾಮನು ಅವನನ್ನು ವಾದದಲ್ಲಿ ಮೂರು ಸಲ ಸೋಲಿಸಿ ವೀರಶೈವನನ್ನಾಗಿ ಮಾಡಿದನು. ಏಕೋರಾಮನ ಪ್ರಭಾವದಿಂದ ವೀರಶೈವ ಮತವು ನಾನಾಮುಖವಾಗಿ ಬೆಳೆಯಿತು. ಕೊನೆಗೆ ಆತನು ಶಂಖುಕರ್ಣನ ಆಜ್ಞಾನುಸಾರವಾಗಿ ತನ್ನ ಮಗನಾದ ಚೆನ್ನರಾಮಾಚಾರ್ಯನಿಗೆ ವೀರಶೈವ ದೀಕ್ಷೆಯನ್ನಿತ್ತು ತಾನು ಮುದ್ರಾಪುರಾಧೀಶನಾದ ಆ ರಾಮಲಿಂಗದಲ್ಲಿ ಐಕ್ಯವಾದನು.

ಈ ಕಥೆಯಲ್ಲಿ ಹೇಳಿರುವ ವೀರಭಾಸ್ಕರರಾಯನಾರೋ ತಿಳಿಯದು, ಅತಏವ ಇದರಲ್ಲಿ ಏಕೋರಾಮನ ಕಾಲವನ್ನು ಗೊತ್ತುಹಚ್ಚತಕ್ಕಂತೆ ಯಾವ ಸಾಧನವೂ ಇಲ್ಲ. ಸ್ವಾಯಂಭುವಾಗಮದಲ್ಲೂ ಸುಪ್ರಭೇದಾಗಮದಲ್ಲೂ[೧೬] ಏಕೋರಾಮಾರಾಧ್ಯನು ಗೋದಾವರಿ ಜಿಲ್ಲೆಯ ದ್ರಾಕ್ಷಾರಾಮ ಎಂಬಲ್ಲಿರುವ ರಾಮನಾಥಲಿಂಗದಿಂದ ಉದ್ಭವಿಸಿ, ಭರತಖಂಡದಲ್ಲಿ ಸಕಲತ್ರ ಸಂಚರಿಸಿ, ಶಿವಭಕ್ತಿಯ ಬೀಜ ಬಿತ್ತಿ, ಗೌತಮೇಂದ್ರನೆಂಬ ಮಹಾರಾಜನಿಗೂ ಕೇದಾರ ಮಂಡಲದಲ್ಲಿದ್ದ ರಾಜಾಧಿರಾಜರಿಗೂ ಶಿವಸಿದ್ಧಾಂತವನ್ನು ಉಪದೇಶಿಸಿ, ಹಿಮಾಲಯದಲ್ಲಿ ವಾಸವಾಗಿದ್ದು ಕೊನೆಗೆ ಅದೇ ರಾಮನಾಥಲಿಂಗದಲ್ಲಿ ಅಡಗಿದನೆಂದದೆ. ಇಲ್ಲಿಯೂ ಈ ಗೌತಮೇಂದ್ರನೆಂಬ ಮಹಾರಾಜನಾರೊ ತಿಳಿಯದು.

ಬ್ರಹ್ಮಾಂಡ ಪುರಾಣಾಂತರ್ಗತವಾದ ದೇವಾಂಗ ಪುರಾಣವೆಂಬ ಸಂಸ್ಕೃತ ಗ್ರಂಥದಲ್ಲಿ[೧೭] (ಸಂಧಿ ೬೮) ಏಕೋರಾಮನು ಆಮೋದಪುರ, ಅಂದರೆ ಮುದ್ರಾಪು... ವೆಂಬ ಮುದನೂರಿನ ದೇವದಾಸ ಅಥವಾ ದೇವ... ದಾಸಿಮಯ್ಯನ ಮಗ—

ಜನಾಂಶ್ಚಕಾರ ತಾನ್ ಶೈವಾಂ ದೇವದಾಸಃ ಶಿವಪ್ರಿಯಃ ॥
ಏವಂ ಪ್ರವರ್ತಮಾನಸ್ಯ ತಸ್ಯ ಶಂಭೋರನುಗ್ರಹಾತ್ ।
ಏಕೋರಾಮ ಇತಿ ಖ್ಯಾತ ಆತ್ಮಜಃ ಸಮಜಾಯತ ॥ ೮೦ ॥

ಅವನು ಪರಮಶಿವನ ಆಜ್ಞೆಯ ಮೇರೆಗೆ ಜೈನ, ಬೌದ್ಧ, ಚಾರ್ವಾಕಾದಿಗಳನ್ನು ವಾದದಲ್ಲಿ ಸೋಲಿಸಿ, ವೀರಶೈವ ಧರ್ಮವನ್ನು ಕರ್ಣಾಟಕದಲ್ಲಿ ಪ್ರಚಾರಿಸಿ, ರುದ್ರನೆಂ... ತನ್ನ ಮಗನಿಗೆ ವೀರಶೈವ ದೀಕ್ಷೆ ಇತ್ತು ತಾನು ಲಿಂಗೈಕ್ಯವಾದನೆಂದಿದೆ. ಹೀಗೆ ಆತನ ಕಥೆಯಲ್ಲಿರುವ ಇಷ್ಟು ವೈಷಮ್ಯವನ್ನು ಪರಿಶೀಲಿಸುವಲ್ಲಿ ಆತನು ಕೊನೆಗೆ ವಾಸ್ತವಿಕ ವ್ಯಕ್ತಿಯೇ ಅಲ್ಲವೇನೋ ಎನಿಸುತ್ತದೆ.

ಆದರೆ ಇದೇ ಏಕೋರಾಮಿ ತಂದೆಯದೆಂದು ತೋರುವ 'ಚೆನ್ನರಾಮ' ಎಂದು ಅಂಕಿತವುಳ್ಳ ಆರು ವಚನಗಳು ಇವೆ,[೧೮] ಕ್ರಿ. ಶ. ಸು. 1210ರಲ್ಲಿ ಕಾಲವಾದನೆಂದು ಮೇಲೆ ಕಂಡಿರುವ ಆದಯ್ಯನ ವಚನಗಳಲ್ಲಿ 'ಏಕೋ... ರಾಮಯ್ಯಗಳ ಆಚಾರನಿಷ್ಠೆ' (೩೯), 'ಏಕೋರಾಮ... ತಂದೆಗಳೆನ್ನ ನಾಸಿಕ' (೪೦) ಎಂಬಲ್ಲಿಯೂ ಇವನ ಹೆಸರಿದೆ, ಹಾಗೂ ಶ್ರೀಪತಿ ಪಂಡಿತನ ಕ್ರಿ. ಶ. ಸು. 1160 ರಲ್ಲಿ ರಚಿತವಾದ[೧೯] ಶ್ರೀಕರಭಾಷ್ಯದ ಲನೆಯ ಮಂಗಲ ಶ್ಲೋಕದಲ್ಲಿ ಈತನನ್ನು 'ಪೂರ್ವಾಚಾರ್ಯ ಪ್ರಶಿಷ್ಯ' ಅಂದರೆ ರೇವಣಸಿದ್ಧನ ಶಿಷ್ಯ ಮರುಳಸಿದ್ಧ, ಮರುಳ ಸಿದ್ಧನ ಶಿಷ್ಯ ಏಕೋರಾಮಿ ತಂದೆ[೨೦] ಎಂದೂ, ಅದರಲ್ಲೇ ಅನ್ಯತ್ರ (ಪ್ರಥಮ ಪಾದ, ತೆಲುಗು ಮುದ್ರಣದ ಪ್ರತಿ, ಪು. ೧೪)[೨೧] 'ಸಮನ್ವಯ ಸೂತ್ರೇ ಏಕೋರಾಮಸಿದ್ಧ ಭಗವತ್ಪಾದಾಚಾರ್ಯೈಃ ಶ್ರೋತವ್ಯಃ' ಎಂದೂ ಸ್ಪ...

೧೬. ಶರಣ ಸಾಹಿತ್ಯ II, ಸಂ. ೬–೭, ಪು. ೨೨೧–೨೨೨.

೧೭. ಅದೇ, ಪು. ೨೨೪; ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ, ಪು. ೯.

೧೮. ಪ್ರಬುದ್ಧ ಕರ್ಣಾಟಕ, XIX (ಈಶ್ವರ ಸಂ. 1), ವಿನಾಯಕ ಸಂಚಿಕೆ, ಪು. ೧೮.

೧೯. ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ, ಪು. ೯.

೨೦. ಆದರೆ ಮರುಳಸಿದ್ಧ ಕಾವ್ಯದಲ್ಲಿಯೂ (ಸಂ. ೫, ಪ. ೧–...) ಮರುಳಸಿದ್ಧನು ತೆಲುಗುಜಾಳಿಗೆ ಬಂದು ಒಕ್ಕಲಿಗ ಸಿದ್ಧನನು ಕರು... ಅಂದರೆ ಪ್ರಾಯಶಃ ಅವನನ್ನು ತನ್ನ ಶಿಷ್ಯನಾಗಿಸಿಕೊಂಡು, ಅವನ... ಮತ ಮಾಡಿಕೊಟ್ಟನೆಂದು ಇದೆಯಲ್ಲದೆ ಏಕೋರಾಮನನ್ನು ಶಿಷ್ಯನಾಗಿ... ಕೊಂಡ ಸುದ್ದಿ ಇಲ್ಲ, ಏಕೋರಾಮೇಶ್ವರ ಪುರಾಣದಲ್ಲಿಯೂ ಏಕೋ... ರಾಮನು ಮರುಳಸಿದ್ಧನ ಶಿಷ್ಯನೆಂದು ಹೇಳಿಲ್ಲ.

೨೧. ಪ್ರಬುದ್ಧ ಕರ್ಣಾಟಕ, XIX (ಈಶ್ವರ ಸಂ. 1) ವಿನಾಯಕ ಸಂಚಿಕೆ, ಪು. ೧೯.

ಸಿದೆ. ಅತಏವ ಏಕೋರಾಮಿ ತಂದೆ ಐತಿಹಾಸಿಕ ವ್ಯಕ್ತಿಯೂ ಆಗಿರಬೇಕು, ಅವನು ಸಂಸ್ಕೃತದಲ್ಲಿ 'ಸಮನ್ವಯ ಸೂತ್ರ' ಎಂಬ ಗ್ರಂಥವನ್ನು ರಚಿಸಿರಲೂ ಬೇಕೆಂದು ಸಿದ್ಧವಾಗುತ್ತದೆ. ಹೀಗೆ ಏಕೋರಾಮನು ಮರುಳಸಿದ್ಧನ ಶಿಷ್ಯನೆಂದು ತಿಳಿಯುವುದರಿಂದ, ಆತನು ಕ್ರಿ. ಶ. ಸು. 1125–1130 ರಷ್ಟಕ್ಕೆ ಹುಟ್ಟಿ, ಆತನ ವಿಷಯ ಐತಿಹಾಸಿಕ ವಿವರವೇನೂ ವಿಶೇಷವಿಲ್ಲದುದರಿಂದಲೂ ಆತನು ಕಾಲವಾಗುವಂದು ಆತನ ದೀಕ್ಷಾ ಗುರುವಾದ ಶಂಖುಕರ್ಣನು ಇನ್ನೂ ಬದುಕಿದ್ದನೆಂದು ತಿಳಿಯುವುದರಿಂದಲೂ, ಪ್ರಾಯಶಃ ಬಹುಕಾಲ ಬಾಳಿರದೆ, ಹೆಚ್ಚಾದರೆ ಕ್ರಿ. ಶ. ಸು. 1165–1170 ರೊಳಗೆ ಶಿವೈಕ್ಯವಾಗಿರಬಹುದು.

ಕ್ರಿ. ಶ. 1181 ರಿಂದ 1203ರ ವರೆಗಣ ಶಾಸನಗಳಲ್ಲಿ ಹೆಸರುದೋರುವ ಹಾನಗಲ್ಲದ ಕಾದಂಬ ಮಹಾ ಮಂಡಳೇಶ್ವರನಾದ ಕಾಮದೇವನ ಆಳೊತ್ತಿನ, ತೇದಿ ಇಲ್ಲದ, ಕ್ರಿ. ಶ. ಸು. 1190ರ ಅಬ್ಬಲೂರಿನ ಸೋಮನಾಥ ದೇವಾಲಯದ ಶಿಲಾಲೇಖದಲ್ಲಿ,[೨೨] ಕುಂತಲದೇಶದ ಅಲಂದೆ ಎಂಬಲ್ಲಿಯ ವತ್ಸಗೋತ್ರದ ಪುರುಷೋತ್ತಮ ಭಟ್ಟನ ಮಗನಾದ, ಹಾಗೂ ತನ್ನ ನಿಶ್ಚಲವಾದ ಶಿವಭಕ್ತಿಯಿಂದ ಏಕಾಂತದ ರಾಮಯ್ಯನೂ ಎಂದು ಹೆಸರಾದ ರಾಮನೆಂಬವನು ಜೈನರೊಡನೆ ಪಂಥ ಕಟ್ಟಿ ತನ್ನ ತಲೆಯನ್ನು ತರಿದುಕೊಂಡು ಅದನ್ನು ಅಬ್ಬಲೂರಿನ ಬ್ರಹ್ಮೇಶ್ವರ ಎಂಬ ಶಿವಲಿಂಗದ ಅಡಿಯಲ್ಲಿ ಇರಿಸಿದ ೭ ದಿನಗಳಲ್ಲಿ ಆ ತಲೆ ಮರಳಿ ಆತನ ಅಟ್ಟೆಗೆ ಸಂದಿಸಿತೆಂದೂ, ಆಮೇಲೆ ಆತನು ಅಬ್ಬಲೂರಿನ ಶಿವಲಿಂಗದ ಬಳಿಯಲ್ಲಿ ಜೈನರು ನಿಲ್ಲಿಸಿದ ಜಿನಮೂರ್ತಿಯನ್ನು ಕೆಡವಿ ಅಲ್ಲಿ ವೀರಸೋಮನಾಥನ ಲಿಂಗವನ್ನು ಪ್ರತಿಷ್ಠಿಸಿದನೆಂದೂ, ಆ ಬಗ್ಗೆ ಜೈನರು ಮಹಾ ಮಂಡಳೇಶ್ವರನಾದ ಬಿಜ್ಜಳನಲ್ಲಿ ದೂರು ಕೊಡುತ್ತಲೆ ಆತನು ರಾಮಯ್ಯನನ್ನು ಕರತರಿಸಿ ತಕ್ಕ ವಿಚಾರ ನಡಸಿ ರಾಮಯ್ಯನಲ್ಲಿ ತಪ್ಪಿಲ್ಲವೆಂದು ಕಂಡು ಜೈನರಿಗೆ ಬುದ್ಧಿ ಹೇಳಿ ಅವರನ್ನು ಹಿಂದಟ್ಟಿ, ಏಕಾಂತದ ರಾಮಯ್ಯನಿಗೆ ಜಯಪತ್ರವಿತ್ತು ಅವನ ಆ ವೀರ ಸೋಮನಾಥ ದೇವಾಲಯಕ್ಕೆ ದತ್ತಿ ಬಿಟ್ಟನೆಂದೂ, ಅನಂತರ ಚಾಳುಕ್ಯ IV ಸೋಮೇಶ್ವರನೂ ಅವನನ್ನು ಕರತರಿಸಿ ಆ ದೇವಾಲಯಕ್ಕೆ ದತ್ತಿ ಬಿಟ್ಟನೆಂದೂ, ಕೊನೆಗೆ ಕಾದಂಬ ಕಾಮದೇವನೂ ಅವನನ್ನು ಬರಿಸಿಕೊಂಡು ಆ ದೇವಾಲಯಕ್ಕೆ ದತ್ತಿ ಬಿಟ್ಟನೆಂದೂ ಹೇಳಿದೆ. ಈ ಕಥೆ ಹರಿಹರನ ಏಕಾಂತರಾಮಿತಂದೆಗಳ ರಗಳೆಯಲ್ಲೂ[೨೩] (ಕ್ರಿ. ಶ. ಸು. 1220) ಇದೆ ಬಸವ ಪುರಾಣದಲ್ಲೂ (ಕ್ರಿ. ಶ. 1369) ಇದೆ (ಸಂಧಿ ೫೨).

ಈ ಅಬ್ಬಲೂರಿನ ಶಾಸನದಲ್ಲಿ ಹೇಳಿರುವ ಅರಸರಲ್ಲಿ ಕಳಚುರ್ಯ ಬಿಜ್ಜಳನು ಕ್ರಿ. ಶ. ಸು. 1140–45 ರಿಂದ 1162ರ ವರೆಗೆ ಪಡುವಣ ಚಾಳುಕ್ಯರ ಕೆಯ್ಕೆಳಗೆ ಮಹಾಮಂಡಳೇಶ್ವರನಾಗಿದ್ದು ಆಮೇಲೆ ಅವರ ರಾಜ್ಯವನ್ನು ಅಪಹರಿಸಿ ಚಕ್ರವರ್ತಿಯಾಗಿ ಕ್ರಿ. ಶ. 1167ರ ವರೆಗೆ ಆಳಿದನು.[೨೪] ಪಡುವಣ ಚಾಳುಕ್ಯ IV ಸೋಮೇಶ್ವರನು ಕ್ರಿ. ಶ. 1184 ರಿಂದ 1189ರ ವರೆಗೆ ಉತ್ತರ ಕರ್ಣಾಟಕದಲ್ಲಿಯೂ ಅಲ್ಲಿಂದ ಸು. 1198ರ ವರೆಗೆ ತೆಂಪಡುವಲಲ್ಲಿ ಬನವಾಸಿಯಲ್ಲಿಯೂ ಆಳಿದನು.[೨೫] ಕಾದಂಬ ಕಾಮದೇವನ ಕ್ರಿ. ಶ. 1181 ರಿಂದ 1203ರ ವರೆಗಣ ಶಾಸನಗಳಿವೆ.[೨೬] ಅತಏವ ಈ ಕಾಲಗಳಿಗೆ ಸರಿಯಾಗಿ ಏಕಾಂತದ ರಾಮಯ್ಯನು ಕ್ರಿ. ಶ. ಸು. 1130 ರಿಂದ 1200ರ ವರೆಗೆ ಇದ್ದಿರಬಹುದು. ಆದರೆ ಅಲಂದೆಯಲ್ಲಿ ಹುಟ್ಟಿದ ಏಕಾಂತದ ರಾಮಯ್ಯನೂ ಮುದನೂರಿನಲ್ಲೊ ದ್ರಾಕ್ಷಾರಾಮದಲ್ಲೊ ಹುಟ್ಟಿದನೆಂಬ ಏಕೋರಾಮಿ ತಂದೆಯೂ ಹೀಗೆ ಸಮಕಾಲೀನರೆಂಬುದು ಸರಿಯೇ ಆದರೂ, ಅವರು ತೀರ ಬೇರೆ ಬೇರೆಯೇ ವ್ಯಕ್ತಿಗಳಲ್ಲದೆ ಸರ್ವಥಾ ಒಬ್ಬನೇ ಅಲ್ಲ, ಹರಿಹರನು ಏಕಾಂತ ರಾಮತಂದೆ ಎಂದೂ ಹೇಳಿರುವ ಏಕಾಂತದ ರಾಮಯ್ಯನ ಈ ಪವಾಡವನ್ನೂ ಏಕೋರಾಮಿ ತಂದೆಗೆ ಎಲ್ಲಿಯೂ ಹೇಳಿಲ್ಲ.

೩

ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಕುರಿತು ಪಾಲ್ಕುರಿಕೆ ಸೋಮನಾಥನ (ಕ್ರಿ. ಶ. ಸು. 1195 ?) ಪಂಡಿತಾರಾಧ್ಯ ಚರಿತ, ಗುರುರಾಜನ (ಕ್ರಿ. ಶ. ಸು.

೨೨. Fleet : *Kanarese Dynasties* (*F K D*), ಪು. 482–484.

೨೩. ಶಿವಾನುಭವ ಗ್ರಂಥಮಾಲೆ : ಹರಿಹರನ ರಗಳೆಗಳು, ಭಾಗ ೬, ಪು. ೧–೧೬.

೨೪. ಮೂರು ಉಪನ್ಯಾಸಗಳು (ಧಾರವಾಡ), ಪು. ೬೪–೬೯.

೨೫. ಅದೇ, ಪು. ೭೧–೭೨.

೨೬. *F K D*, ಪು. 563.

1430) ಸಂಸ್ಕೃತ ಪಂಡಿತ ಚರಿತ್ರ, ನೀಲಕಂಠಾಚಾರ್ಯನ (ಕ್ರಿ. ಶ. ಸು. 1485) ಆರಾಧ್ಯಚಾರಿತ್ರ, ಸಿದ್ಧನಂಜೇಶನ (ಕ್ರಿ. ಶ. 1650) ಗುರುರಾಜ ಚಾರಿತ್ರ ಎಂಬ ಗ್ರಂಥಗಳೂ[೨೭] ಇವೆ, ಸಂಸ್ಕೃತ ಪಂಚ ಬ್ರಹ್ಮೋದಯ ಭಾಷ್ಯದಲ್ಲೂ[೨೮] ಅವನನ್ನು ಕುರಿತು ಹೇಳಿದೆ. ಇವಲ್ಲಿ ಮೊತ್ತಮೊದಲಿನದಾದ ಸೋಮನಾಥನ ಪಂಡಿತಾರಾಧ್ಯ ಚರಿತದಲ್ಲಿ[೨೯] ಇವನ ಕಥೆ ಹೀಗದೆ—

ನಂದೀಶ್ವರನು ಬಸವೇಶ್ವರನಾಗಿ ಭೂಮಿಯಲ್ಲಿ ಅವತರಿಸಲಿಕ್ಕೆ ಹೋಗುವಾಗ ಅವನ ಕಾರ್ಯದಲ್ಲಿ ನೆರವಾಗುವಂತೆ ಶಿವನು ಭೃಂಗಿಯ ನಿಷ್ಠೆ, ದೂರ್ವಾಸಾದಿಗಳ ಶಾಪಶಕ್ತಿ, ರುದ್ರಗಣಗಳ ಪ್ರಸಾದೈಕರತಿ, ವೀರಭದ್ರನ ಶೌರ್ಯವೇ ಮೊದಲಾದ ಗುಣಗಳನ್ನು ಕಲೆಹಾಕಿ ಒಂದು ಮೂರ್ತಿಯನ್ನು ನಿರ್ಮಿಸಿ, ಆದನ್ನು ಭೂಲೋಕದಲ್ಲಿ ಬ್ರಾಹ್ಮಣನಾಗಿ ಜನಿಸಿ ಶಿವಭಕ್ತಿಯನ್ನು ಹೆಚ್ಚಿಸೆಂದು ಕಳಿಸುತ್ತಲೆ, ಆ ಮೂರ್ತಿ ಗೋದಾವರಿ ಜಿಲ್ಲೆಯ ದ್ರಾಕ್ಷಾರಾಮದಲ್ಲಿ ಭೀಮೇಶ್ವರ ಲಿಂಗದ ಅರ್ಚಕನಾಗಿದ್ದ ಭೀಮನ ಪಂಡಿತನಿಗೆ ಮಗನಾಗಿ ಹುಟ್ಟಿ ಮಲ್ಲಿಕಾರ್ಜುನ ಎಂದು ಹೆಸರಾಯಿತು. ಆತನಿಗೆ ದ್ರಾಕ್ಷಾರಾಮದ ನೆರೆಯ ಕೋಟಪಲ್ಲಿ ಎಂಬಲ್ಲಿದ್ದ ಆರಾಧ್ಯದೇವನು[೩೦] ಶೈವಮಂತ್ರದ ದೀಕ್ಷೆ ಇತ್ತನು. ಗುಂಟೂರು ಜಿಲ್ಲೆಯ ಈಗಣ ಚಂದವ್ರೋಲು ಎಂಬ ಧನದಪುರದ ಅರಸನಾದ ವೆಲನಾಡು ಚೋಳರಾಜನ ಆಸ್ಥಾನದಲ್ಲಿದ್ದ ಪಂಡಿತಾರಾಧ್ಯನು ಬೌದ್ಧಾಚಾರ್ಯರೊಂದಿಗೆ ವಾದ ಬೆಳಸಿದನು. ಶ್ರೀಕಾಕುಳದ ಮಲ್ಲೇಶ್ವರ ದೇವಾಲಯದಲ್ಲಿದ್ದ ಲೋಹದ ದೀಪಸ್ತಂಭವನ್ನು ಬೌದ್ಧಾಚಾರ್ಯರು ಕಿತ್ತು ತಂದು ಆ ಚೋಳನ ಸಭೆಯಲ್ಲಿ ನಿಲ್ಲಿಸಿದುದನ್ನು ಕಂಡು ತಾಳಲಾರದೆ ಮಲ್ಲಿಕಾರ್ಜುನನು ಅವರನ್ನು ಕೊಲ್ಲಿರೆಂದು ಆಜ್ಞಾಪಿಸುತ್ತಲೆ ಆತನ ಶಿಷ್ಯರು ಅವರನ್ನು ಕೊಂದರು.[೩೧] ಆ ಘೋರಕೃತ್ಯಕ್ಕೆ ಕೋಪಿಸಿ ಅರಸನು ಪಂಡಿತಾರಾಧ್ಯನ ಕಣ್ಣುಗಳನ್ನು ಕೀಳಿಸಿದನು. ಈತನು ಆ ಚೋಳನಿಗೆ ಶಾಪವಿತ್ತು ಶಿವಾನುಗ್ರಹದಿಂದ ಕಣ್ಣುಗಳನ್ನು ಮರಳಿ ಪಡೆದುಕೊಂಡು,[೩೨] ಅಲ್ಲಿಂದ ಶಿಷ್ಯರೊಂದಿಗೆ ಹೊರಟು ಕಲ್ಯಾಣನಗರದಲ್ಲಿ ವೀರಶೈವಮತ ಪ್ರತಿಷ್ಠಾಪನಾಚಾರ್ಯನಾಗಿ ಪ್ರಖ್ಯಾತಿಗೆ ಬರುತ್ತಲಿದ್ದ ಬಸವೇಶ್ವರನನ್ನು ಸಂದರ್ಶಿಸಬೇಕೆಂದು ಆತನಿಗೆ ಮುಂದಿಳುಹಿ ಅವನಲ್ಲಿಗೆ ಪ್ರಯಾಣ ಮಾಡಿದನು. ಆದರೆ ದಾರಿಯಲ್ಲಿ ವನಿಪುರ ಎಂಬಲ್ಲಿಗೆ ಮುಟ್ಟುವಷ್ಟರಲ್ಲಿ ಬಸವೇಶ್ವರನು ಅಂದಿಗೆ ಆ ದಿನಗಳ ಹಿಂದೆ ಕೂಡಲ ಸಂಗಮೇಶ್ವರನಲ್ಲಿ ಐಕ್ಯವಾದನೆಂದು ಸುದ್ದಿ ಬಂತು.[೩೩] ಅದನ್ನು ಕೇಳಿ ಬಹಳ ಚಿಂತಾಕ್ರಾಂತನಾಗಿ, ಅಲ್ಲಿಂದ ಕರ್ನೂಲು ಜಿಲ್ಲೆಯ ಶ್ರೀಶೈಲಕ್ಕೆ ಹೋಗಿ ಅಲ್ಲಿ ಅಲ್ಪಕಾಲದಲ್ಲಿಯೇ ಮಲ್ಲಿಕಾರ್ಜುನ ಪಂಡಿತಾರಾಧ್ಯನೂ ಲಿಂಗೈಕ್ಯವಾದನು.

ಪಂಡಿತಾರಾಧ್ಯನು ತೆಲುಗು ಶಿವತತ್ತ್ವಸಾರವನ್ನೂ[೩೪]

---

೨೭. ಕರ್ಣಾಟಕ ಕವಿಚರಿತೆ I, ಪು. 213.

೨೮. ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ, ಪು. ೧೦.

೨೯. ಶರಣ ಸಾಹಿತ್ಯ III, ಸಂ. ೧೦–೧೧, ಪು. ೬೦೧–೬೦೩; ಪ್ರಬುದ್ಧ ಕರ್ಣಾಟಕ XVI, (ಭಾವ ಸಂ॥), ದೀಪಾವಳಿಯ ಸಂಚಿಕೆ, ಪು. ೬–೭.

೩೦. ಪಂಚಬ್ರಹ್ಮೋದಯ ಭಾಷ್ಯದ (ಅಧ್ಯಾಯ ೯, ಶ್ಲೋಕ ೧೩–೧೫) ಹೇಳಿಕೆಯ ಮೇರೆಗೆ ಕೋಟಿಪಲ್ಲ್ಯಾರಾಧ್ಯನು ರೇವಣಸಿದ್ಧನಿಗೆ ತನ್ನ ಹೆಂಡತಿಯಾದ ಸೋಮಲಾದೇವಿಯಲ್ಲಿ ಹುಟ್ಟಿದ ಮಗ (ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ, ಪು. ೯.)

೩೧. ಮಲ್ಲಿಕಾರ್ಜುನ ಪಂಡಿತಾರಾಧ್ಯನ ತೆಲುಗು ಶಿವತತ್ತ್ವಸಾರದಲ್ಲಿ (ಪ್ರಬುದ್ಧ ಕರ್ಣಾಟಕ XVI, ಭಾವ ಸಂ॥ ದೀಪಾವಳಿಯ ಸಂ॥ ಪು. ೨೨–೨೩) ಶಿವನಿಂದಕರನ್ನು ಕೊಲ್ಲಬೇಕೆಂದು (ಕಂದ ೨೬೫–೨೬೬ ಮತ್ತು ೨೬೯) ಹೇಳಿದೆ—

ಶಿವನಿಂದಕುಲಗು ಪಾಪುಲ
ನವಿಚಾರಿತವೃತ್ತಿ ಜಂಪನಗು ನೀಶಾನಾ ॥ ೨೬೫ ॥

೩೨. ಶಂಕರಾರಾಧ್ಯನ 'ಬಸವೇಶ ವಿಜಯ'ದಲ್ಲಿ (ಕರ್ಣಾಟಕ ಕವಿಚರಿತೆ I, ಪು. 21; ಮತ್ತು ಅಡಿ ಬರೆಹ 3) ಪಂಡಿತಾರಾಧ್ಯನು ಈಶ್ವರನ ಅನುಗ್ರಹದಿಂದ ಊರ್ಧ್ವನೇತ್ರವನ್ನು ಪಡೆದನೆಂದಿದೆ—

ಶ್ರೀ ಮಲ್ಲಿಕಾರ್ಜುನಾರಾಧ್ಯ ದೇವಾಯಾಂಜಲಿರರ್ಪ್ಯತೇ।
ಅವಾಪ್ತೋರ್ಧ್ವದೃಶೇ ರುದ್ರಾತ್ ವಿದ್ರಾವಿತವಿರೋಧಿನೇ॥

೩೩. ಗುರುರಾಜನ 'ಪಂಡಿತ ಚಾರಿತ್ರ'ದಲ್ಲಿ ಪಂಡಿತಾರಾಧ್ಯನು ಬಸವೇಶ್ವರನೊಡನೆ ಮಾತನಾಡಿದನೆಂದು ಹೇಳಿದೆ (ಕರ್ಣಾಟಕ ಕವಿಚರಿತೆ I, ಪು. 214, ಅಡಿಬರೆಹ 1).

೩೪. ಶಿವಲೆಂಕ ಮಂಚಣ್ಣ, ಶ್ರೀಕರಭಾಷ್ಯದ ಶ್ರೀಪತಿ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತರೆಂಬ ವೀರಶೈವ ಪಂಡಿತತ್ರಯದಲ್ಲಿ ಕೊನೆಯವನಾದ ಮಲ್ಲಿಕಾರ್ಜುನ ಪಂಡಿತನೂ ತೆಲುಗು ಶಿವತತ್ತ್ವಸಾರದ ಮಲ್ಲಿಕಾರ್ಜುನ ಪಂಡಿತಾರಾಧ್ಯನೂ ಅಭಿನ್ನರೆಂದು (ಪ್ರಬುದ್ಧ ಕರ್ಣಾಟಕ XVI, ದೀಪಾವಳಿಯ ಸಂಚಿಕೆ, ಪು. ೬–೭; ಶರಣ ಸಾಹಿತ್ಯ III, ಸಂ. ೧೦–೧೧, ಪು. ೬೦೧, ೬೦೪) ಅಭಿಪ್ರಾಯವಿದೆ. ಆ ಪಂಡಿತತ್ರಯದ ಮಲ್ಲಿಕಾರ್ಜುನ ಪಂಡಿತನೂ ವೀರಶೈವ ಚತುರ್ಥಾಚಾರ್ಯನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನೂ ಭಿನ್ನರೆಂದೂ (ಪ್ರಬುದ್ಧ ಕರ್ಣಾಟಕ XIX, ವಿನಾಯಕನ ಸಂಚಿಕೆ, ಪು. ೧೬–೧೭), ಅಭಿನ್ನರೆಂದು (ಕರ್ಣಾಟಕ ಕವಿಚರಿತೆ I, ಪು. 215), ಮತಭೇದವಿದೆ. ಈ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಚತುರ್ಥಾಚಾರ್ಯನಲ್ಲವೆಂದೂ (ಕರ್ಣಾಟಕ ಕವಿಚರಿತೆ III, ಅವತರಣಿಕೆ ಪು. 86), ಅಹುದೆಂದೂ (ಕರ್ಣಾಟಕ ಕವಿಚರಿತೆ I,

ಕನ್ನಡದಲ್ಲಿ ವಚನಗಳನ್ನೂ[೩೫] ರಚಿಸಿರುತ್ತಾನೆ. ಇವನ ವಚನಗಳಲ್ಲಿ 'ಗುರುಸಿದ್ಧಮಲ್ಲ' ಎಂಬ ಅಂಕಿತವಿದೆ. ಹುಟ್ಟು ತೆಲುಗನಾದ ಈತನಿಗೆ ಬಸವೇಶ್ವರನು ಕಳುಹಿಸಿ ಕೊಟ್ಟ ಭಸಿತವನ್ನು ಧರಿಸಿಕೊಳ್ಳುತ್ತಲೆ ಕರ್ಣಾಟಕ ಭಾಷೆ ಬಂದಿತೆಂದು[೩೬] ಪ್ರತೀತಿ ಇದೆ. ಪಂಡಿತಾರಾಧ್ಯನು ಬಸವೇಶ್ವರನಿಗಿಂತ ೨ ವರ್ಷ ಈಚೆ ಗತಿಸಿದನೆಂದು ತೆಲುಗು ಪಂಡಿತರು ತಮಗೆ ಬರೆದಿರುತ್ತಾರೆಂದು ಕರ್ಣಾಟಕ ಕವಿಚರಿತಕಾರರು ಹೇಳಿರುತ್ತಾರೆ.[೩೭]

ಹರಿಹರನ ಲಿಂಗಾರ್ಚನೆಯ ರಗಳೆಯಲ್ಲಿ[೩೮] (ಕ್ರಿ. ಶ. ಸು. 1210)

> ಪಂಡಿತಾರಾಧ್ಯನಿಂಡೆಯ ಶಾಂತಿಮಯ್ಯನಂ

ಎಂಬಲ್ಲಿಯ ಪಂಡಿತಾರಾಧ್ಯನು ಇವನೇ ಆಗಿರಬಹುದು. ಹೇಗೂ ಮೇಲೆ ಕಂಡಿರುವ ಆದಯ್ಯನ ವಚನಗಳಲ್ಲಿ 'ಪಂಡಿತಾರಾಧ್ಯನ ಸ್ವಯಂಪಾಕ' (೩೯) ಹಾಗೂ 'ಪಂಡಿತಾರಾಧ್ಯರೆನ್ನ ಜಿಹ್ವೆ' (೪೦) ಎಂಬಲ್ಲಿ ರೇವಣಸಿದ್ಧ, ಮರುಳಸಿದ್ಧ ಮತ್ತು ಏಕೋರಾಮಿ ತಂದೆ ಎಂಬ ಈ ವೀರ ಶೈವ ಆಚಾರ್ಯತ್ರಯದ ಜತೆಯಲ್ಲಿ ಹೆಸರಿಸಲ್ಪಟ್ಟಿರುವ ಪಂಡಿತಾರಾಧ್ಯನು ಚತುರ್ಥಾಚಾರ್ಯನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನೇ (ಹೊರತು ಪಂಡಿತತ್ರಯದಲ್ಲಿ ಕೊನೆಯವನಾದ ಮಲ್ಲಿಕಾರ್ಜುನ ಪಂಡಿತನಲ್ಲ) ಎಂದು ಪ್ರತ್ಯಕ್ಷವಿದೆ. ಇವನ ಶಿವತತ್ತ್ವಸಾರದಲ್ಲಿ ಶ್ರೀಪತಿ ಪಂಡಿತನ ಹೆಸರೂ ಇದೆ—

> ಒಕ್ಕಡೆ ದೈವಮು ಶಿವುಡನಿ
> ನಿಕ್ಕಮು ಸೇಯುಟುಕು ಮುಡಿಚೆ ನಿಪ್ಪುಲು ಚೀರನ್ ।
> ಸ್ವಕ್ಕಕ ಶ್ರೀಪತಿ ಪಂಡಿತು
> ಡಕ್ಕಜಮುಗ ವಿಜಯವಾಡನಲ ಜಮ್ಮಿ ಶಿವಾ ॥ ೪೦೬ ॥[೩೯]

ಬಸವೇಶ್ವರನ ಹೆಸರೂ ಇದೆ—

> ಅಸಮೇಕ್ಷಣ ಶಿವಭಕ್ತುಂ
> ಡಸಮು ಶ್ರೀಪಮ್ಮಡನಿ ಪಲಿಕಿಯುಸ್ಮಲ ತೋಡನ್ ।
> ಬೊಸಪೋರ್ಕೆ ಬಂಡಾರುವು
> ಬಸವಡು ವಿಸಮುತ್ತಿ ತ್ರಾವಿಬ್ರತುಕಡೆ ರುದ್ರಾ ॥ ೪೩೧ ॥[೪೦]

ಆದರೆ ಶ್ರೀಪತಿ ಪಂಡಿತನ ಶ್ರೀಕರಭಾಷ್ಯದಲ್ಲಿ ಮೇಲೆ ಕಂಡಿರುವಂತೆ ರೇವಣಸಿದ್ಧ, ಮರುಳಸಿದ್ಧ ಹಾಗೂ ಏಕೋರಾಮಸಿದ್ಧನೆಂಬ ಏಕೋರಾಮಿ ತಂದೆಯ ಹೆಸರುಗಳು ಇದ್ದಿರುವಲ್ಲಿ ಪಂಡಿತಾರಾಧ್ಯನ ಹೆಸರಿಲ್ಲದ ಕಾರಣ, ಶ್ರೀಕರಭಾಷ್ಯವು ರಚಿತವಾದ ಕ್ರಿ. ಶ. ಸು. 1160ರಲ್ಲಿ ಈತನು ಇನ್ನೂ ಪ್ರಖ್ಯಾತನಾಗಿರಲಿಲ್ಲ ಎಂದು ಖಚಿತವಾಗುತ್ತದೆ. ಹಾಗೂ ಪಂಡಿತಾರಾಧ್ಯನು ಬಸವೇಶ್ವರನಿಗಿಂತ ಅಲ್ಪಕಾಲದಲ್ಲಿಯೇ ಗತಿಸಿದನೆಂದು ಸೋಮನಾಥನ ಪಂಡಿತಾರಾಧ್ಯ ಚರಿತದಿಂದಲೂ, ಬಸವೇಶ್ವರನಿಗಿಂತ ೨ ವರ್ಷ ಈಚೆ ಗತಿಸಿದನೆಂದು ಕರ್ಣಾಟಕ ಕವಿಚರಿತೆಯಿಂದಲೂ[೩೬] ತಿಳಿಯುತ್ತದೆ. ಬಸವೇಶ್ವರನು ಕ್ರಿ. ಶ. 1167ರ ಪೂರ್ವಭಾಗದಲ್ಲಿ ಲಿಂಗೈಕ್ಯವಾದನೆಂದು ನಾನು ಅನ್ಯತ್ರ[೪೧] ನಿರ್ಣಯಿಸಿರುತ್ತೇನೆ. ಆತಏವ ಶ್ರೀಪತಿ ಪಂಡಿತನ ಹಾಗೂ ಬಸವೇಶ್ವರನ ಕಾಲಗಳಿಗೆ ಸರಿಯಾಗಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಕ್ರಿ. ಶ. ಸು. 1130ರಷ್ಟಕ್ಕೆ ಹುಟ್ಟಿ ಕ್ರಿ. ಶ. 1169ರಲ್ಲಿ ಶಿವೈಕ್ಯನಾದನೆಂದೂ, ಅವನ ಸಮಸಾಮಯಿಕನಾದ ವೆಲನಾಡಿನ ಚೋಳರಾಜನೆಂಬುವನು ಕ್ರಿ. ಶ. 1163 ರಿಂದ 1180ರ ವರೆಗೆ ಶಾಸನಗಳಲ್ಲಿ ಹೆಸರು ದೊರೆವ II ರಾಜೇಂದ್ರಚೋಡನೆಂಬ ವೆಲನಾಂಡಿನ ತುಂಡರಸನಾಗಿರಬೇಕೆಂದೂ[೪೨] ನಿಶ್ಚಯಿಸಲಾಗುತ್ತದೆ.

ಗೋವಿಂದ ಪೈ

---

ಪು. 215; ಪ್ರಬುದ್ಧ ಕರ್ಣಾಟಕ XIX, ವಿನಾಯಕನ ಸಂಚಿಕೆ, ಪು. ೧೬–೧೭) ಮತಭೇದವಿದೆ. ಇವರಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವತತ್ತ್ವಸಾರದ ರಚಕನೂ ವೀರಶೈವ ಚತುರ್ಥಾಚಾರ್ಯನೂ ಎಂಬ ಮತವನ್ನು ಈ ಲೇಖದಲ್ಲಿ ಅಂಗೀಕರಿಸಿದೆ.

೩೫. ಪ್ರಬುದ್ಧ ಕರ್ಣಾಟಕ, XIX (ಈಶ್ವರ ಸಂ॥), ವಿನಾಯಕನ ಸಂಚಿಕೆ, ಪು. ೧೬–೧೭.

೩೬. ಕರ್ಣಾಟಕ ಕವಿಚರಿತೆ I, ಪು. 213.

೩೭. ಅದೇ, III, ಅವತರಣಿಕೆ, ಪು. 86.

೩೮. ಶಿವಾನುಭವ ಗ್ರಂಥಮಾಲೆ: ಹರಿಹರನ ರಗಳೆಗಳು, ಭಾಗ ೧, ಪು. ೧೨.

೩೯. ಶರಣ ಸಾಹಿತ್ಯ III, ಸಂ. ೮, ಪು. ೫೦೫.

೪೦. ಪ್ರಬುದ್ಧ ಕರ್ಣಾಟಕ XVI (ಭಾವ ಸಂ॥) ದೀಪಾವಳಿಯ ಸಂಚಿಕೆ, ಪು. ೨೪. ಮುಂದಣ ೪೩೨–೪೩೩ನೆಯ ಕಂದಗಳಲ್ಲಿಯೂ ಬಸವೇಶ್ವರನ ಹೆಸರಿದೆ.

೪೧. ಮೂರು ಉಪನ್ಯಾಸಗಳು (ಧಾರವಾಡ), ಪು. ೯೨.

೪೨. *Historical Inscriptions of Southern India*, ಪು. 399.

# ಕನ್ನಡನಾಡು ಮತ್ತು ನೃತ್ಯಕಲೆ

ಸುಮಾರು ಹತ್ತು ಹದಿನೈದು ವರ್ಷಗಳ ಹಿಂದೆ ನೃತ್ಯವೆಂದರೆ ಒಂದು ತುಚ್ಛವಿದ್ಯೆ, ಅದನ್ನು ಅವಲಂಬಿಸುವವರು ಹೀನ ವ್ಯಕ್ತಿಗಳು ಎಂಬ ತಿಳಿವಳಿಕೆ ಬಹಳ ಪ್ರಬಲವಾಗಿತ್ತು. ಆದರೆ ಕ್ರಮೇಣ, ಉದಯಶಂಕರ್, ಮೇನಕಾ, ರುಕ್ಮಿಣಿ ಅರುಂಡೇಲ್, ರಾಮಗೋಪಾಲ್ ಮೊದಲಾದ ವ್ಯಕ್ತಿಗಳು ನೃತ್ಯವೇ ತಮ್ಮ ಜೀವನ ಕಸಬೆಂದು ಎಣಿಸಿ ಅದಕ್ಕೆ ಇಡೀ ಹಿಂದೂಸ್ಥಾನದಲ್ಲೆ ಮತ್ತೊಮ್ಮೆ ಉನ್ನತಸ್ಥಾನವು ದೊರಕುವಂತೆ ಮಾಡಿದುದು ಹಳೆಯ ಪುರಾಣವೇ ಸರಿ. ನೃತ್ಯಕಲೆಯ ಪುನರುತ್ಥಾನವೇನೋ ಆಗಿದೆ. ನೃತ್ಯಕಲೆಯ ಬೀಜವು ನಮ್ಮ ದೇಶದ ನಾಲ್ಕಾರು ದಿಕ್ಕುಗಳಲ್ಲೂ ದೊಡ್ಡ ಪಟ್ಟಣಗಳಲ್ಲೂ ಚಿಕ್ಕ ಹಳ್ಳಿಗಳಲ್ಲೂ ಬಿತ್ತಲ್ಪಟ್ಟಿವೆ. ಕೆಲವೆಡೆಗಳಲ್ಲಿ ಅದು ಸಾಂಗವಾಗಿ ಚಿಗುರಿ ಬೆಳೆದು ಪಕ್ವವಾದ ನಟನಟಿಯರನ್ನು ಹೊರಪಡಿಸಿದೆ. ಉತ್ತರ ಹಿಂದೂಸ್ಥಾನ, ಬಂಗಾಲ, ಬೊಂಬಾಯಿ, ತಮಿಳುನಾಡು, ಮಲಬಾರ, ಆಂಧ್ರದೇಶ, ಮೊದಲಾದ ಪ್ರದೇಶಗಳಲ್ಲಿ ನೃತ್ಯಕಲೆಯು ಉನ್ನತ ಸ್ಥಿತಿಗೆ ಬಂದಿದೆ. ಆಯಾ ಪ್ರದೇಶದ ಜನರ ಪ್ರೋತ್ಸಾಹದಿಂದ ಸ್ಥಳಿಕ ನಟನಟಿಯರು ತಮ್ಮ ತಮ್ಮ ಪಾಂಡಿತ್ಯವನ್ನು ಪ್ರೌಢಿಮೆಯಿಂದ ಪ್ರದರ್ಶಿಸಿ ನೃತ್ಯಕಲೆಯಲ್ಲಿ ಗೌರವವನ್ನು ಹೊಂದಿದ್ದಾರೆ. ಇಂತಹ ಆಶಾದಾಯಕ ಸ್ಥಿತಿ ನಮ್ಮ ಇಡೀ ಕನ್ನಡ ನಾಡಿನಲ್ಲಿ ಮಾತ್ರ ಇಲ್ಲವೆಂಬುದನ್ನು ನಾನು ದೃಢವಾಗಿ ಹೇಳಬಲ್ಲೆ.

ಹೀಗೆ ಹೇಳುವುದು ಕನ್ನಡ ದೇಶದ ಮೇಲೆ ಹೊರಿಸಿದ ಒಂದು ದೊಡ್ಡ ಅಪವಾದವೆಂದು ಕೆಲವರು ತಿಳಿಯಬಹುದು. ಯಾಕೆ, ನಮ್ಮ ಕನ್ನಡ ನಾಡಿನಲ್ಲಿ ಇಂಥ ಕಲಾಕೋವಿದರಿಲ್ಲವೇ? ಇಂಥ ಮಹನೀಯರು ಹೆಸರುವಾಸಿಯಾಗಿ ನೃತ್ಯಕಲೆಯನ್ನು ಮುಂದಕ್ಕೆ ತರಲಿಲ್ಲವೇ? ಎಂದು ಪ್ರಶ್ನೆ ಬರಬಹುದು. ನಮ್ಮ ನಾಡಿನಲ್ಲಿ ಕಲಾಸಕ್ತಿ ಇರಬಹುದು. ಆದರೆ ನಮ್ಮ ನಾಡಿನಲ್ಲಿರುವ ಕಲೆಯನ್ನು ತಮಿಳುನಾಡು, ಮಲೆಯಾಳ ಅಥವಾ ಆಂಧ್ರ ದೇಶಗಳ ಕಲೆಗೆ ಹೋಲಿಸಿದರೆ ನಮ್ಮಲ್ಲಿ ಈ ನೃತ್ಯಕಲೆಯು ಯಾವ ದುಃಸ್ಥಿತಿಯಲ್ಲಿ ಇದೆ ಎಂಬುದು ಪ್ರಕಟವಾಗುತ್ತದೆ. ತಮಿಳುನಾಡನ್ನೇ ನಾವು ಉದಾಹರಣೆಯಾಗಿ ತೆಗೆದುಕೊಳ್ಳೋಣ. ಇತ್ತೀಚೆಗೆ ಭರತನಾಟ್ಯ ಈ ನಾಡಿನಲ್ಲಿ ಬಹಳವಾಗಿ ಮುಂದುವರಿದಿದೆ. ಭರತನಾಟ್ಯದಲ್ಲಿ ಪ್ರವೀಣರಾದ ನಟ್ಟುವರು ಬಹಳವಾಗಿ ಇದ್ದಾರೆ. ಅವರ ಶಿಷ್ಯವರ್ಗದಲ್ಲಿ ಅನೇಕಾನೇಕ ನೃತ್ಯತಾರೆಗಳು ಭರತನಾಟ್ಯದಲ್ಲಿ ಪ್ರಾವೀಣ್ಯವನ್ನು ಹೊಂದಿ ಪಂಡಿತರ ಸಭೆಗಳಲ್ಲಿ ಬಹುಮಾನವನ್ನೂ ಬಿರುದುಗಳನ್ನೂ ಪಡೆದಿದ್ದಾರೆ. ನಾಟ್ಯಕಲಾನಿಧಿ ವಿದ್ವಾನ್ ಮೀನಾಕ್ಷಿ ಸುಂದರಂ ಪಿಳ್ಳೆ ಇವರು ಭರತನಾಟ್ಯದಲ್ಲಿ ಮುಕುಟ ಶಿರೋಮಣಿ. ಇವರ ಪಾಂಡಿತ್ಯ, ಭರತಶಾಸ್ತ್ರದಲ್ಲಿರುವ ಪ್ರವೀಣತೆ, ಹೀಗೆಯೇ ಸಂಗೀತದ ಜ್ಞಾನ, ಮತ್ತು ಮೃದಂಗ, ಪಿಟೀಲು ಇಂತಹ ಪಕ್ಕ ವಾದ್ಯಗಳಲ್ಲಿರುವ ವಿದ್ಯೆ, ಇವೆಲ್ಲವೂ ಅಗಾಧವಾದದ್ದು. ಈ ವಿದ್ವಾಂಸರ ನೃತ್ಯಜ್ಞಾನದ ಅಕ್ಷಯ ಪಾತ್ರೆಯಿಂದ ಬಹಳ ಮಂದಿ ಶಾಸ್ತ್ರೋಕ್ತ ನೃತ್ಯಸಾರವನ್ನು ಪಾನಮಾಡಿದ್ದಾರೆ. ಇವರ ಶಿಷ್ಯವರ್ಗದಲ್ಲಿರುವ ತಾರಾಮಂಡಲದ ಶ್ರೇಷ್ಠತ್ವವು ಇನ್ನು ಯಾವ ನಟ್ಟುವರ ಶಿಷ್ಯವರ್ಗದಲ್ಲೂ ಇಲ್ಲವೆಂದು ಹೇಳಬಹುದು. ಶ್ರೀಮತಿಗಳಾದ ರುಕ್ಮಿಣಿ ಅರುಂಡೇಲ್, ಪಂದನಲ್ಲೂರ್ ಜಯಲಕ್ಷ್ಮಿ, ಶಾಂತಾ, ತಾರಾ, ಚೌಧುರಿ, ಪೆರಿಯನಾಯಕಿ, ಜಾನಕಿ ಮತ್ತು ಶ್ರೀಮಾನ್ ರಾಮಗೋಪಾಲ್ ಇವರಲ್ಲದೆ ಇನ್ನೂ ಅನೇಕ ವ್ಯಕ್ತಿಗಳು ಇವರಲ್ಲಿ ಭರತನಾಟ್ಯವನ್ನು ಕಲಿತು, ಇವರ ಹೆಸರನ್ನೂ ಇವರ ಕಲೆಯ ಶ್ರೇಷ್ಠತೆಯನ್ನೂ ಇಡೀ ಹಿಂದೂಸ್ಥಾನದಲ್ಲಿ ಹರಡಿದ್ದಾರೆ. ಈಗಲೂ ಕೂಡ ಇವರಲ್ಲಿ ವಿದ್ಯೆ ಕಲಿತುಕೊಳ್ಳಲು ಉತ್ತರ, ಪೂರ್ವ, ಪಶ್ಚಿಮ ಹಿಂದೂಸ್ಥಾನದಿಂದ ಅನೇಕ ಸ್ತ್ರೀ ಪುರುಷರು ಬಂದು ಹೋಗುತ್ತಲೇ ಇದ್ದಾರೆ. ಇಂತಹ ಮಹನೀಯರ ಆಶ್ರಯದಲ್ಲಿ ನಾನೂ ಮತ್ತು ನನ್ನ ಭಾರ್ಯೆ ಶ್ರೀಮತಿ ಚಂದ್ರಭಾಗಾ ದೇವಿಯವರೂ ಭರತನಾಟ್ಯವನ್ನು ಕಲಿತಿರುವೆವೆಂದು ಹೇಳುವುದು ನನಗೊಂದು ಹೆಮ್ಮೆಯ ಮಾತೇ ಆಗಿದೆ. ನಮ್ಮ ಗುರುಗಳೆಂಬ ಅಭಿಮಾನದಿಂದಲೋ ಅಥವಾ ಪಕ್ಷಪಾತದಿಂದಲೋ ಹೀಗೆ ನಾನು ಅವರನ್ನು ಪ್ರಶಂಸಿಸುತ್ತೇನೆಂದು ವಾಚಕರು

ತಿಳಿದುಕೊಳ್ಳಬಹುದು. ಆದರೆ ಇಡೀ ತಮಿಳುನಾಡಿನಲ್ಲಿ ಇವರನ್ನು ನೃತ್ಯಕಲಾ ಕೋವಿದರೂ, ವಿದ್ವಾಂಸರೂ ಅಲ್ಲದೆ ಇತರ ನಟ್ಟುವರೂ ಕೊಂಡಾಡುತ್ತಿರುವಾಗ ನನ್ನ ಈ ಪ್ರಶಂಸೆಯ ಪ್ರಮಾಣ ತೀರ ಅಲ್ಪವದ್ದೇ. ಅದಂತಿರಲಿ, ಹಾಗೆಯೇ ತಮಿಳುನಾಡಿನಲ್ಲಿ ಮುತ್ತುಕುಮಾರಸ್ವಾಮಿ, ದಿವಂಗತ ಕಂಡಪ್ಪ, ರಾಮಯ್ಯ ಪಿಳ್ಳೆ, ವಡಿವೇಲು ಮುಂತಾದ ಭರತನಾಟ್ಯದ ಗುರುಗಳಿಂದ ಅನೇಕ ಸ್ತ್ರೀ ಪುರುಷರು ಈ ಶಾಸ್ತ್ರವನ್ನು ಕಲಿತು ಭರತನಾಟ್ಯಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. ಇತ್ತೀಚೆಗೆ ಸಾಧಾರಣ ವಾಗಿ ಪ್ರತಿ ಮನೆಯಿಂದಲೂ ಬೆಳಗಿನ ಝಾವ ಮೃದಂಗ, ಕಟ್ಟುಕೋಲಿನ ಶಬ್ದ ಕೇಳಿ ಬರುತ್ತಿದೆ. ಚಿಕ್ಕ ಚಿಕ್ಕ ಹೆಣ್ಣುಮಕ್ಕಳಿಗೆ ಭರತನಾಟ್ಯದಲ್ಲಿ ಸ್ವಲ್ಪ ವಾದರೂ ತಿಳಿವಳಿಕೆ ತಮಿಳುನಾಡಿನಲ್ಲಿ ಇದ್ದೇ ಇರು ತ್ತದೆ. ನಮ್ಮ ನೆರೆಮನೆಯೊಂದರಲ್ಲಿ ಬರಿಯ ಹತ್ತು ವರ್ಷದ ಬಾಲೆಯೊಬ್ಬಳು ತಾನು ಭರತನಾಟ್ಯವನ್ನು ಸಾಂಗವಾಗಿ ಕಲಿತು ಅದನ್ನು ಮನೆಯ ಇತರ ಚಿಕ್ಕ ಬಾಲೆಯರಿಗೆ ಹೇಳಿಕೊಡುವುದನ್ನು ನಾನು ದಿನವೂ ನೋಡುತ್ತಿದ್ದೇನೆ. ಈ ಚಿಕ್ಕ ಬಾಲೆಯು ಹಾಡು ಹೇಳಿ, ಕಟ್ಟುಕೋಲು ಹಾಕಿ, ಇತರರಿಗೆ ನಾಟ್ಯ ಕಲಿಸುವು ದೆಂದರೆ ತೀರ ಸೋಜಿಗದ ವಿಷಯ. ಇಂತಹ ಅನೇಕರು ತಮಿಳು ನಾಡಿನಲ್ಲಿ ಇರುವರೆಂದು ನಂಬಿದ್ದೇನೆ. ಉತ್ತಮ ಕುಲದವರು ಕೂಡ ಈ ಶಾಸ್ತ್ರದಲ್ಲಿ ತಕ್ಕ ಆಸಕ್ತಿಯನ್ನಿಟ್ಟು ಕೊಂಡು ತಮ್ಮ ತಮ್ಮ ಮಕ್ಕಳಿಗೆ ಅದನ್ನು ಶ್ರೇಷ್ಠ ನಟ್ಟುವರಿಂದ ಕಲಿಸಿಕೊಡಿಸುವುದರಿಂದಲೇ ತಮಿಳು ನಾಡಿನಲ್ಲಿ ಭರತನಾಟ್ಯವು ಅಷ್ಟು ಮುಂದುವರಿದಿದೆ.

ಇತ್ತಕಡೆ ಆಂಧ್ರದೇಶದಲ್ಲಿ 'ಕೂಚಿಪುಡಿ' ಭರತ ನಾಟ್ಯ ಪ್ರಸಿದ್ಧವಾಗಿದೆ. ಇದೂ ಒಂದು ವಿಧವಾದ ಭರತನಾಟ್ಯ. ತಮಿಳುನಾಡಿನ ಮತ್ತು ಆಂಧ್ರದೇಶದ ನೃತ್ಯಗಳಲ್ಲಿ ಹೋಲಿಕೆ ತುಂಬಾ ಇದೆ. ಒಂದುವೇಳೆ ತಮಿಳುನಾಡಿನ ಭರತ ನಾಟ್ಯದ ಸೊಬಗು, ವಿಶೇಷ ಅಂಗ ವಿನ್ಯಾಸ, ಒಲಪು ಕೂಚಿಪುಡಿ ನೃತ್ಯದಲ್ಲಿ ಇಲ್ಲ ದಿರಬಹುದು. ಆದರೂ ಕೂಚಿಪುಡಿ ನೃತ್ಯವು ಶಾಸ್ತ್ರಕ್ಕನು ಸಾರವಾದ ತನ್ನದೇ ಆದ ಒಂದು ಆಕೃತಿಯನ್ನು ಹೊಂದಿದೆ. ಶ್ರೀಮಾನ್ ವೇದಾಂತಂ ರಾಘವಯ್ಯ ನವರು ಈ ನೃತ್ಯದಲ್ಲಿ ಪ್ರಖ್ಯಾತಿಯನ್ನು ಹೊಂದಿದವರಲ್ಲಿ ಒಬ್ಬರಾಗಿದ್ದಾರೆ.

ಮಲೆಯಾಳ ಕಥಕಳಿ ವಿಚಾರವಾಗಿ ನಾನು ಏನೂ ಹೊಸತಾಗಿ ಬರೆಯಬೇಕಾಗಿಲ್ಲ. ಈ ಮಹದ್ವಿದ್ಯೆಯಲ್ಲಿ ಹೆಸರು ಪಡೆದ ಗುರುವರ್ಯ ಪಂಗಡದಲ್ಲಿರುವವರ ಶ್ರೀಮಾನ್ ಕುಂಜು ಕುರೂಪ್, ರಾವುಣ್ಣಿ ಮೇನನ್, ಶಂಕರನ್ ನಂಬೂದ್ರಿ, ಪಣ್ಣಿಕರ್ ಮುಂತಾದವರು. ನಮ್ಮ ದೇಶದ ನರ್ತನಗಳಲ್ಲೆಲ್ಲಾ ಅತಿ ಪ್ರಚಂಡವೂ ಸರ್ವರಸ ಪೂರಿತವೂ ಆದ ನರ್ತನವೆಂದರೆ ಈ ಕೇರಳದ ಕಥ ಕಳಿ. ಇದರ ಹೆಸರೇ ಸೂಚಿಸುವಂತೆ ಇದೊಂದು ಕಥೆಯನ್ನೊಳಗೊಂಡ ನೃತ್ಯ. ಈ ವಿದ್ಯೆಯನ್ನನುಸರಿಸುವ ಶಿಷ್ಯರು ಚಿಕ್ಕಂದಿನಲ್ಲೇ ಇದರ ವ್ಯಾಸಂಗಕ್ಕೆ ಪ್ರಾರಂಭ ಮಾಡುತ್ತಾರೆ. ನೂತನವಾಗಿ ಕಲಿಯುವವನ ದಿನಚರಿಯು ಗಡುತರವಾದದ್ದು. ಕಾರಣ, ಈ ನೃತ್ಯದಲ್ಲಿ ವಿಶಿಷ್ಟ ವಾದ ವಿವಿಧ ತರದ ಬಾಗುವಿಕೆ ಬಳುಕುವಿಕೆಗಳು ವಿದ್ಯಾರ್ಥಿಯ ದೇಹ ಮೃದುವಾಗಿದ್ದರೆ ಮಾತ್ರ ಸಾಧ್ಯ. ಮೈ ಕೈ ಬಾಗುವಿಕೆಗೆ ತಕ್ಕ ಪ್ರಾಥಮಿಕ ಅಂಗಸಾಧನೆ, ಅದರ ಜತೆಗೆ ಕಠಿಣ ಸಂವಾಹನ (Massage), ಅದಾದ ಮೇಲೆ ಸೂರ್ಯೋದಯಕ್ಕೆ ಮೊದಲೇ ಮಾಡಬೇಕಾದ ವಿಧ ವಿಧವಾದ ಕಣ್ಣು ಸಾಧನೆ, ಹಾಗೆಯೇ ಪ್ರಥಮ ಪಾದ ವಿನ್ಯಾಸಗಳು, ಬಾಗುವಿಕೆಗಳು, ಕೊನೆಯದಾಗಿ ಮುದ್ರೆಗಳ ಜ್ಞಾನ, ಇವುಗಳನ್ನೆಲ್ಲ ಸಾಧಿಸಲಿಕ್ಕೆ ಕಡಮೆ ಪಕ್ಷಕ್ಕೆ ನಾಲ್ಕಾರು ವರ್ಷಗಳಾದರೂ ಒಬ್ಬ ವಿದ್ಯಾರ್ಥಿಗೆ ಬೇಕಾಗುವುವು. ಹೀಗೆಯೇ ಕೆಲವಾರು ನೃತ್ಯಗಳನ್ನು ಕಲಿತು, ಆಮೇಲೆ ನೃತ್ಯ ನಾಟಕಗಳಲ್ಲಿ ಉಚಿತವಾದ ಪಾತ್ರಗಳನ್ನು ವಹಿಸಿ, ಇತರರ ಸಂಗಡ ಮುದ್ರೆ ಗಳಿಂದ ಸಂವಾದವನ್ನು ಮಾಡಿ, ವಿದ್ಯಾರ್ಥಿಯು ಪಕ್ವ ವಾಗಿ ಈ ವಿದ್ಯೆಯಲ್ಲಿ ನೈಪುಣ್ಯವನ್ನು ಹೊಂದಿ, ನೃತ್ಯ ಅಧಿದೇವತೆಯು ಸದಾ ಅನುಗ್ರಹಿಸಿರುವಂತೆ ಮಾಡಿ ಕೊಳ್ಳಬೇಕಾದರೆ ಒಂದು ಜೀವಮಾನವೇ ಬೇಕಾಗು ತ್ತದೆ. ಇಂತಹ ಕಟ್ಟುನಿಟ್ಟುಗಳಿಂದ ಪೂರಿತವಾದ ವಿದ್ಯೆ ಬರುವುದು ಧೃಢಮನಸ್ಸಿದ್ದು ಕಠಿಣವಾದ ಸಾಧ ನಾಶಕ್ತಿ ತೋರಿಸುವುದರಿಂದಲೇ. ಗೋಪಿನಾಥ, 'ಪೂತನಿ' ಕೃಷ್ಣನ್, ಆನಂದ ಶಿವರಾಮ, ಮಾಧವನ್, ಕುಮಾರನ್, ಮುಂತಾದವರು ಈ ವಿದ್ಯೆಯಲ್ಲಿ ಪಾಂಡಿತ್ಯವನ್ನು ಹೊಂದಿ ಹೆಸರು ಪಡೆದವರಾಗಿ ದ್ದಾರೆ.

ಮೇಲೆ ವಿವರಿಸಿದ ಮೂರು ತರದ ಭರತ ನಾಟ್ಯದ ಶಾಖೆಗಳು ಆಯಾಯ ನಾಡಿನ ಮುಕುಟಮಣಿಗಳಂತೆ ಬೆಳಗುತ್ತಿರುವುವು. ಆದರೆ ಕನ್ನಡ ನಾಡಿನಲ್ಲಿ ಮಾತ್ರ ನಾವು ಹೆಮ್ಮೆಪಟ್ಟು ಹೇಳುವಂತಹ ನಾಟ್ಯವಿಲ್ಲ. ಇಲ್ಲಿರುವುದು ಹೆಸರಿಗೆ ಮಾತ್ರ ಭರತ ನಾಟ್ಯ. ಮೊದಲು ನಾನು ಭರತನಾಟ್ಯ ವ್ಯಾಸಂಗವನ್ನು ಬೆಂಗಳೂರಿನಲ್ಲಿರುವ ನಟ್ಟುವರಿಂದಲೇ ಕಲಿತೆ. ನಮ್ಮ ಗುರುಗಳ ಮೇಲೆ ಈಗಲೂ ನನಗೆ ಭಕ್ತಿ ಸನ್ಮಾನ ಇದೆ. ಆದರೂ ನಮ್ಮ ಮೈಸೂರು ದೇಶದ ಭರತನಾಟ್ಯ ತಮಿಳು ನಾಡಿನ ಅಂತಸ್ತಿಗೆ ಬರುವುದಿಲ್ಲವೆಂದೇ ಹೇಳಬೇಕು.

ದಕ್ಷಿಣದೇಶದ ಭರತನಾಟ್ಯದಲ್ಲಿ ಮೊದಲನೆಯ ನೃತ್ಯ ವೆಂಬುದು ಅಲಾರಿಪ್ಪು. ಇದು ಒಂದು ಆವಾಹನೆ ರೂಪವಾದ ದೇವರ ಪ್ರಾರ್ಥನೆ. ಇದಾದ ಮೇಲೆ ಜತಿಸ್ವರ, ಎಂದರೆ ತಾಳಕ್ಕನುಸರಿಸಿ ಹೆಜ್ಜೆ ಮತ್ತು ಕೈ ಜೋಡಿಸುವ ವಿನ್ಯಾಸ. ಇದರಲ್ಲಿ ಭರತ ನಾಟ್ಯದಲ್ಲಿರುವ ಅಡವುಗಳು (ಹೆಜ್ಜೆ ವಿನ್ಯಾಸ, ಕೈ ವಿನ್ಯಾಸ, ಕತ್ತಿನ ಚಲನ, ಬಾಗುವಿಕೆ) ಮತ್ತು ಮುಕ್ತಾಯಗಳು ಇವೆ. ಆ ಮೇಲೆ ಶಬ್ದ ಅಥವಾ ಸ್ವರಜತಿ—ರಸಪೂರಿತವಾದ ಸಾಹಿತ್ಯಕ್ಕೆ ಅನುಸರಿಸುವ ಅಭಿನಯ. ತರುವಾಯ ಭರತನಾಟ್ಯದಲ್ಲಿ ಶ್ರೇಷ್ಠವಾದ ಅಭಿನಯ ಅಂಗವಿನ್ಯಾಸ ಪೂರಿತವಾದ, ತಾಳಕ್ಕೆ ಹೊಂದಿ ಹೋಗುವ ವರ್ಣ. ಈ ವರ್ಣಗಳೆಂಬ ನೃತ್ಯಗಳು ಗುರುಗಳ ಕಲಿಸಿದ ಜ್ಞಾನ ಶ್ರೇಷ್ಠತೆಯನ್ನೂ ನಟನಟಿಯರ ಪಾಂಡಿತ್ಯವನ್ನೂ ಹೊರ ಪಡಿಸುತ್ತವೆ. ವರ್ಣಗಳನ್ನು ಸರಿಯಾಗಿ ನರ್ತಿಸಿದರೆ ಒಂದು ಘಂಟೆಯ ಕಾಲವಾದರೂ ಹಿಡಿಯಬಹುದು. ಆ ಮೇಲೆ ಪದ, ಜಾವಳಿ ಮುಂತಾದ ಹಾಡುಗಳಿಗೆ ಅಭಿನಯ. ಕೊನೆಯದಾಗಿ ಅಂಗವಿನ್ಯಾಸ ಪೂರಿತವಾದ ತಿಲ್ಲಾನವೆಂಬ ಮುಕ್ತಾಯ ನೃತ್ಯ. ಇದು ಭರತ ನಾಟ್ಯದ ಸಾಂಪ್ರದಾಯಿಕವಾದ ಕ್ರಮ.

ಈ ಎಲ್ಲ ನೃತ್ಯಗಳೂ ಕನ್ನಡ ನಾಡಿನಲ್ಲಿವೆ. ಆದರೆ ಅಡವುಗಳಲ್ಲಿರುವ ಬಾಗುವಿಕೆ, ಇತರ ಅವಯವಗಳ ಚಲನ ಮೊದಲಾದುವು ತಮಿಳು ನಾಡಿನಲ್ಲಿರುವ ಹಾಗೆ ನಾನು ಎಲ್ಲೂ ನೋಡಲಿಲ್ಲ. ಮೂಲ ಅಡವುಗಳು, ತೀರ್ಮಾನಗಳು ಮತ್ತು ಮುಕ್ತಾಯಗಳನ್ನು ತೆಗೆದು ಕೊಂಡರೆ ತಮಿಳುನಾಡಿನಲ್ಲಿ ಹೊಸ ಹೊಸದಾದ ನೂರಾರು ಅಡವುಗಳನ್ನು ನಾನು ನೋಡಿದ್ದೇನೆ. ... ಗಳನ್ನು ನಾನು ಕನ್ನಡ ನಾಡಿನಲ್ಲಿ ಕಲಿತಿರುವವ... ನಟ್ಟುವರಲ್ಲೂ ಎಂದಿಗೂ ನೋಡಿಲ್ಲ. ಹಾಗೆಯೇ ತ... ನಾಡಿನಲ್ಲಿರುವ ತೀರ್ಮಾನಗಳು, ಸೊಗಸಾದ ... ವಿಕೆ ಕನ್ನಡ ನಾಡಿನಲ್ಲಿ ಕಂಡದ್ದಿಲ್ಲ. ಹೀಗೇಯೇ ... ನಯದಲ್ಲೂ ತಮಿಳುನಾಡಿನಲ್ಲಿರುವ ನಯ, ಶೃಂಗಾ... ತಟ್ಟನೆ ಮುಖಭಾವವನ್ನು ಬದಲಿಸುವ ಚಮತ್ಕಾ... ಸಾಹಿತ್ಯಕ್ಕೆ ತಕ್ಕ ನೃತ್ಯವಿನ್ಯಾಸ, ಇವೇ ಮೊದಲ... ಮನೋರಂಜಕವಾದ ವಿನ್ಯಾಸಗಳು ನಮ್ಮ ನಾ... ಕಲೆಯಲ್ಲಿ ತುಸು ಕಡಮೆಯಾಗಿದೆ ಎನ್ನಬಹು... ಇನ್ನೊಂದು ಮಾತು. ಕನ್ನಡನಾಡಿನ ನಟನಟಿ... ಭರತನಾಟ್ಯ ಮಾಡುವಾಗ, ಪ್ರೇಕ್ಷಕರು "ಇದೇನ... ನಿಂತಲ್ಲಿಯೇ ಕೈಗಳನ್ನು ಸಮನಾಗಿಟ್ಟು ಬರಿಯ ... ವಿನ್ಯಾಸ ಮಾಡುತ್ತಾರೆ. ನಾಟ್ಯರಂಗದಲ್ಲಿ ಚಲನೆ... ಇಲ್ಲ" ಎಂದು ಹೇಳುವ ಟೀಕೆಯನ್ನು ನಾನು ಅನ... ಸಾರಿ ಕೇಳಿದ್ದೇನೆ. ಆದರೆ ತಮಿಳು ನಾಡಿನ ಭ... ನಾಟ್ಯದಲ್ಲಿ, ಶುದ್ಧ ನೃತ್ಯದಲ್ಲಾಗಲೀ ಅಥವಾ ... ನಯದಲ್ಲಾಗಲಿ, ನಟನಟಿಯರು ನಾಟ್ಯರಂಗವ... ದೊಡ್ಡದಾದರೂ ಕೂಡ ಅದರಲ್ಲಿ ಯುಕ್ತಿಯಿಂದ ನೃ... ವಿನ್ಯಾಸದಿಂದ (Choreography) ತಿರುಗಿ, ಇಡೀ ನಾ... ರಂಗವೇ ತಮ್ಮ ನೃತ್ಯಕ್ಕೆ ಇವೆ ಎಂಬ ಭಾವನೆಯ... ಪ್ರೇಕ್ಷಕರಿಗೆ ತಿಳಿಯಪಡಿಸುತ್ತಾರೆ. ಇವೇ ಮೊದಲ... ವ್ಯತ್ಯಾಸಗಳು ನಾವು ಈ ಎರಡು ನೃತ್ಯ ಶಾಖೆಗ... ಪರೀಕ್ಷಿಸಿ ನೋಡಬಹುದು.

ಇನ್ನು ಭರತನಾಟ್ಯದ ಪದ ಸಾಹಿತ್ಯಗಳ ವಿ... ತೆಗೆಯೋಣ. ಮೊದಲು ಅಭಿನಯವೆಲ್ಲ ತೆಲುಗು ... ಸಾಹಿತ್ಯಗಳಿಂದ ಆಗುತ್ತಿತ್ತು. ಈಗಲೂ ಕೂಡ ಮು... ವರ್ಣಗಳೆಲ್ಲ ತೆಲುಗು ಭಾಷೆಯಲ್ಲೇ ಇವೆ. ಹಾಗೆ... ಪದಗಳೂ ಜಾವಳಿಗಳೂ ತೆಲುಗಿನಲ್ಲಿ ಇರುವು... ಜಾಸ್ತಿ. ಆದರೆ ಇತ್ತೀಚೆಗೆ ತಮಿಳು ನಾಡಿನಲ್ಲಿ ಅನೇ... ಮಹನೀಯರು ನಾಟ್ಯಕ್ಕೆ ಯೋಗ್ಯವಾದ ಪದಗಳನ್ನೂ ವರ್ಣಗಳನ್ನೂ ಜಾವಳಿಗಳನ್ನೂ ತಮಿಳಿನಲ್ಲೇ ರಚಿ... ಅವುಗಳನ್ನು ನಟನಟಿಯರಿಗೆ ಪಾಠಮಾಡಿಸಿದ್ದಾ... ತೆಲುಗು ಸಾಹಿತ್ಯವೇನೋ ಮೂಲಾಧಾರ. ಆ... ತಮಗೆ ಅರ್ಥವಾಗುವ ಭಾಷೆಯಲ್ಲಿಯೇ ಪದಸಾಹಿ...

ವನ್ನು ಕೇಳಿದರೆ ಪ್ರೇಕ್ಷಕರಿಗೆ ಸಹಜವಾಗಿ ಅಭಿನಯದ ತಾತ್ಪರ್ಯವುಂಟಾಗಿ ನೃತ್ಯದ ಆನಂದವನ್ನು ಅನುಭವಿಸುತ್ತಾರೆ. ಪ್ರೇಕ್ಷಕರು ನಟನಟಿಯರೊಂದಿಗೆ ಸೇರಿ, ಸಾಹಿತ್ಯದ ಆವೇಶದಲ್ಲಿ (inspiration) ಸಮಭಾಗಿಗಳಾದ ಹೊರತು ಈ ಕಲೆಯಿಂದ ಯಾವ ಪ್ರಯೋಜನವೂ ಇಲ್ಲ. ರಸಿಕತೆಯ ರಸೋತ್ಪಾದನೆಯು (æsthetic emotion)ಪ್ರೇಕ್ಷರಿಗೆ ಸ್ವಪ್ರಯತ್ನದಿಂದಲೇ ಬರತಕ್ಕದ್ದು. ಹಾಗೆಂದಮೇಲೆ ತೆಲುಗುನಾಡಿನಲ್ಲಿ ತೆಲುಗು ಸಾಹಿತ್ಯವೂ, ತಮಿಳುನಾಡಿನಲ್ಲಿ ತಮಿಳು ಸಾಹಿತ್ಯವೂ ಪ್ರೇಕ್ಷಕರನ್ನು ಮರುಳುಗೊಳಿಸುತ್ತದೆ. ಕನ್ನಡನಾಡಿನಲ್ಲಿ ಹಿಂದೆ ನಡೆದದ್ದು ಮತ್ತು ಈಗಲೂ ನಡೆಯುವುದು ತೆಲುಗು ಸಾಹಿತ್ಯವೇ. ಈ ಸಾಹಿತ್ಯದ ಅರ್ಥಗ್ರಹಿಸುವ ಜನರು ತೀರಾ ಕಡಮೆ. ಏನೋ ಕೆಲವು ಕನ್ನಡ ಹಾಡುಗಳನ್ನು ಮಾತ್ರ ಅಭಿನಯಿಸುವುದನ್ನು ಕನ್ನಡ ನಾಡಿನಲ್ಲಿ ನೋಡಿದ್ದೇನೆ. "ಕೃಷ್ಣಾ ನೀ ಬೇಗನೇ ಬಾರೊ" "ಕಣ್ಣಿಳಿವ್ಯಾತಕೋ ಕಾವೇರಿ ರಂಗನ ನೋಡದಾ" ಮೊದಲಾದ ಹಾಡುಗಳ ಅಭಿನಯ ನಮ್ಮ ನಾಡಿನಲ್ಲಿ ಸರ್ವಸಾಧಾರಣವಾಗಿದೆ. ಆದರೆ ನೃತ್ಯರಂಗದಲ್ಲಿ ಕನ್ನಡ ವರ್ಣವಾಗಲೀ ಬೇರೆ ಇತರ ಶೃಂಗಾರ ಪೂರಿತವಾದ ಪದ ಜಾವಳಿಗಳಾಗಲೀ ನಾನು ಎಂದೂ ಕೇಳಿಲ್ಲ. ಮುಖ್ಯವಾಗಿ ನಮ್ಮ ಕನ್ನಡ ನಾಡಿನಲ್ಲಿ ಇಂತಹ ವರ್ಣಗಳನ್ನೂ ಪದಗಳನ್ನೂ ರಚಿಸುವವರಿಲ್ಲವೆಂಬುದಲ್ಲ ನನ್ನ ಅಭಿಪ್ರಾಯ. ಆದರೆ ಅಂಥವರಿಗೆ ಉತ್ತೇಜನವಿಲ್ಲದೆಯೂ, ತಕ್ಕ ಪುರಸ್ಕಾರವಿಲ್ಲದೆಯೂ ನಮ್ಮ ನಾಡಿನಲ್ಲಿ "ಹಾಡಿದ್ದೇ ಹಾಡೋ ಕಿಸುಬಾಯ ದಾಸ" ಎಂಬಂತೆ ಈಗಲೂ ನಮ್ಮಲ್ಲಿ ಹಿಂದಿನ ತೆಲುಗು ಸಾಹಿತ್ಯಗಳೇ, ಹಿಂದಿನ ತೆಲುಗು ಪದಗಳೇ. ಒಟ್ಟಿನಲ್ಲಿ ಕನ್ನಡ ಭಾಷೆಯಿಂದ ನಮ್ಮ ಕನ್ನಡ ನಾಡಿನ ನೃತ್ಯಕಲೆಗೆ ಏನೂ ಸಹಾಯವಾಗಿಲ್ಲವೆಂದು ಹೇಳಬಹುದು.

ನಮ್ಮ ಕನ್ನಡ ನಾಡಿನಲ್ಲಿ ನೃತ್ಯಕಲೆಯು ಶ್ರೇಷ್ಠವಾದ ಸ್ಥಾನವನ್ನು ಪಡೆಯುವಂತೆ ಈ ಕೆಳಗಿನ ಕೆಲವು ಸೂಚನೆಗಳನ್ನು ಕೊಡಬಹುದು.

ಮೊದಲನೆಯದಾಗಿ ನೃತ್ಯ ಕಲಿಯಬೇಕೆಂದಿರುವ ವಿದ್ಯಾರ್ಥಿಗಳು ಹೆಸರುವಾಸಿಯಾದ ಶ್ರೇಷ್ಠ ಗುರುಗಳಿದ್ದೆಡೆಗೇ ಹೋಗಿ ಭರತನಾಟ್ಯವನ್ನು ಕಲಿಯಬೇಕು. ಊರಿಂದೂರಿಗೆ ಹೋಗಿ, ಗುರುಗಳಿರುವ ಸ್ಥಾನದಲ್ಲಿ ತಿಂಗಳುಗಟ್ಟಳೆ ಇದ್ದು, ಹೇರಳ ಹಣ ವೆಚ್ಚಮಾಡಿ, ಸೂರ್ಯೋದಯದಿಂದ ಕತ್ತಲಾಗುವ ತನಕ ಅಂಗಸಾಧನೆಯಲ್ಲಿ ದುಡಿದು, ಕಲೆಯನ್ನು ಕಲಿಯುವುದೆಂದರೆ ಸುಲಭವಾದ ಕೆಲಸವಲ್ಲ. ಆದುದರಿಂದ ಇದನ್ನು ಕೈಕೊಳ್ಳುವುದು ಎಲ್ಲರಿಂದ ಸಾಧ್ಯವಿಲ್ಲ. ಹಿರಿಯರಿಂದ ಉತ್ತೇಜನವಿಲ್ಲದೆ ಆಗುವ ಕೆಲಸವಲ್ಲ. ಆದರೆ ನಮ್ಮ ನಾಡಿನ ನರ್ತನ ಕಲೋಪಾಸಕರು ಹೀಗೆ ಮಾಡದೆ ಇದ್ದರೆ ಕಲೆಯು ಈಗಿರುವ ಸ್ಥಿತಿಯಲ್ಲೇ ಇರುವುದೇನೋ ಖಂಡಿತ. ಇದಕ್ಕೆ ಒಂದು ಉಪಾಯವಿದೆ—ಊರ ಜನರು ಸೇರಿ ಒಂದು ಚಿಕ್ಕ ನರ್ತನ ಶಾಲೆಯನ್ನು ತೆರೆದು ಶ್ರೇಷ್ಠ ಗುರುಗಳೊಬ್ಬರನ್ನು ಬರಮಾಡಿಸಿ ಅಲ್ಲಿನ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ವಿದ್ಯೆಕೊಡಿಸುವಂತೆ ಮಾಡುವುದು. ಮನಸ್ಸಿದ್ದರೆ ಅದೊಂದು ದೊಡ್ಡ ಕೆಲಸವಲ್ಲ. ಹೀಗೆ ಮಾಡಿದರೆ ಯೋಗ್ಯವಾದ ನರ್ತನ ಕಲೆಯು ನಮ್ಮ ದೇಶದಲ್ಲಿ ಹರಡುವುದರಲ್ಲಿ ಸಂಶಯವಿಲ್ಲ. ಒಂದು ಮಾತನ್ನು ಮಾತ್ರ ನಾವು ನೆನಪಿನಲ್ಲಿಡಬೇಕು. ನರ್ತನ ಕಲೆಯು ಕಷ್ಟಪಟ್ಟು ದುಡಿಯುವವರಿಗೆ ಮಾತ್ರ ಸಾಧ್ಯವೇಹೊರತು ಸುಮ್ಮನೆ ಕಾಲಹರಣಮಾಡಿ ಒಂದೆರಡು ನೃತ್ಯಗಳನ್ನು ಕಲಿತುಕೊಳ್ಳುವವರಿಗೆ ಹೇಳಿದ್ದಲ್ಲ.

ಎರಡನೆಯದಾಗಿ ಕನ್ನಡನಾಡಿನಲ್ಲಿ ಕನ್ನಡ ಪದಾಭಿನಯ ಮುಂದುವರಿಯಬೇಕು. ನಮ್ಮ ನಾಡಿನಲ್ಲಿ ಕನ್ನಡ ಪದಗಳು, ಜಾವಳಿಗಳು ಇಲ್ಲವೇ? ಏತಕ್ಕೆ ಇವುಗಳಿಗೆ ತಕ್ಕ ಅಭಿನಯವನ್ನು ಜೋಡಿಸಬಾರದು? ನಮ್ಮ ನಾಡಿನ ವಿದ್ವಾಂಸರು ನಾಟ್ಯಕ್ಕೆ ಯೋಗ್ಯವಾದ ಕನ್ನಡ ವರ್ಣ ಇತ್ಯಾದಿಗಳನ್ನು ಏತಕ್ಕೆ ರಚಿಸಬಾರದು?

ಮೂರನೆಯದಾಗಿ ತಮಿಳುನಾಡಿನಲ್ಲಿರುವ ಹಾಗೆ ಪ್ರೈಮರಿ ಮಿಡಲ್ ಮತ್ತು ಹೈಸ್ಕೂಲುಗಳಲ್ಲಿ ನೃತ್ಯವನ್ನು ವ್ಯಾಸಂಗಿಕ ವಿಷಯವಾಗಿಟ್ಟು ಇದರಲ್ಲಿ ಆಸಕ್ತಿ ಇರುವವರಿಗೆ ಹೆಚ್ಚಿನ ಮಟ್ಟಿನ ವಿದ್ಯೆಯನ್ನು ಕಲಿಸಲು ಪ್ರಯತ್ನಿಸಬೇಕು. ಹೀಗೆ ಮಾಡಿದರೆ ಮುಂದಕ್ಕೆ ಈ ವಿದ್ಯಾರ್ಥಿಗಳು ಶ್ರೇಷ್ಠ ಆಚಾರ್ಯರಲ್ಲಿಗೆ ಹೋಗಿ ನಾಟ್ಯಕಲೆಯ ಪಾಂಡಿತ್ಯವನ್ನು ಹೊಂದಲು ಅನುಕೂಲವಾಗುವುದು.

ಕೊನೆಯದಾಗಿ, ಉತ್ತೇಜನವಿಲ್ಲದೆ ಯಾವಕಾರ್ಯವೂ ಆಗುವುದು ಕಷ್ಟಸಾಧ್ಯ. ಜನರ ಪ್ರೋತ್ಸಾಹ, ಸರಕಾರದ

ಸಹಾಯ ಅಥವಾ ರಾಜ ಪ್ರೋತ್ಸಾಹ ಇವುಗಳಿಲ್ಲದ ಕಲೆಗೆ ಕಳೆಕಟ್ಟುವುದಿಲ್ಲ. ಇದನ್ನು ಎಷ್ಟುಸಲ ಹೇಳಿದರೂ ಸಾಲದು. ತಿರುವಾಂಕೂರಿನಲ್ಲಿ ಮಹಾರಾಜರು ಗೋಪೀನಾಥರನ್ನು ರಾಜನರ್ತಕ ಪದವಿಯಲ್ಲಿ ಕುಳ್ಳಿರಿಸಿ ಗೌರವಿಸಿದ್ದು ಎಲ್ಲರಿಗೂ ತಿಳಿದೇ ಇದೆ. ಹಾಗೆಯೇ ಅನೇಕ ಕಡೆಗಳಲ್ಲಿ ರಾಜರಿಂದ ಅಥವಾ ಶ್ರೀಮಂತರಿಂದ ಉತ್ತೇಜನ ಪಡೆದು ಈ ಕಲೆಯು ಬಹಳವಾಗಿ ಮುಂದುವರಿದಿದೆ. ನಮ್ಮ ನಾಡಿನಲ್ಲಿ ಮಾತ್ರ ಈ ವಿದ್ಯೆಗೆ ಏಕೆ ಅಂತಹ ಉತ್ತೇಜನ ಇಲ್ಲ ಎಂಬ ಪ್ರಶ್ನೆ ಆಗಾಗ್ಗೆ ಮನಸ್ಸಿಗೆ ಬರುತ್ತದೆ.

ಕನ್ನಡ ನಾಡಿನಲ್ಲಿ ಉತ್ಕೃಷ್ಟವಾದ ನೃತ್ಯಕಲೆ ಹರಡಲೀ ಎಂಬುದೇ ಈ ಲೇಖನದ ಮುಖ್ಯ ಉದ್ದೇಶ.

ಯು. ಎಸ್. ಕೃಷ್ಣರಾವ್, ಎಂ.ಎಸ್ಸಿ.

# ಕನ್ನಡ ಸಾಹಿತ್ಯದ ಸ್ವರೂಪ ಮತ್ತು ಉದ್ದೇಶ

ಸಾಹಿತ್ಯವೆಂಬ ಶಬ್ದವು ಬಹಳ ವ್ಯಾಪಕವಾದ ಅರ್ಥವುಳ್ಳದ್ದು. ಮನೆ ಕಟ್ಟುವವನೂ, ಮದುವೆ ಮಾಡುವವನೂ, ಅಡಿಗೆ ಮಾಡುವವನೂ, ಚಿತ್ರ ಬರೆಯುವವನೂ ತನಗೆ ಬೇಕಾದ ಸಾಮಾನುಗಳಿಗೆ ಸಾಹಿತ್ಯವೆನ್ನುವನು. ಆದರೆ ಈ ಲೇಖನದಲ್ಲಿ ಪ್ರಸ್ತಾಪಿಸಲ್ಪಡುವ ಸಾಹಿತ್ಯವು ಸಾಹಿತಿಗಳ ಸಾಹಿತ್ಯ. ಕಾವ್ಯ ನಾಟಕಾದಿಗಳೇ ಇದರ ಅಂಗಗಳು. ಕನ್ನಡ ಭಾಷೆಯಲ್ಲಿ ಇಂತಹ ಉಜ್ವಲವಾದ ಸಾಹಿತ್ಯವುಂಟೆಂಬ ವಿಷಯವು ಅನೇಕರಿಗೆ ಇನ್ನೂ ತಿಳಿಯದಿರುವುದು ಆಶ್ಚರ್ಯಕರವಾಗಿದೆ. ಈ ವಿಷಯದಲ್ಲಿ ಕನ್ನಡಿಗರು ಅನ್ಯಪ್ರಾಂತ್ಯದವರಿಗೆ ಸ್ವಲ್ಪವೂ ತಲೆ ತಗ್ಗಿಸಬೇಕಾಗಿಲ್ಲ. ನಮ್ಮ ನಾಡು ಸೊಬಗಿನ ಬೀಡು; ಅದಕ್ಕೆ ಉಜ್ವಲವಾದ ಇತಿಹಾಸವಿದೆ, ಉತ್ತಮವಾದ ಸಂಸ್ಕೃತಿಯಿದೆ, ಅಪಾರವಾದ ಸಾಹಿತ್ಯವಿದೆ. ನಮ್ಮ ಸಾಹಿತ್ಯವು ಸುಮಾರು ಎರಡು ಸಾವಿರ ವರ್ಷಗಳಿಂದ ಬೆಳೆದುಬಂದಿರುತ್ತದೆಂಬುದನ್ನು ಸೂಚಿಸುವುದಕ್ಕೆ ಅನೇಕ ಪ್ರಮಾಣಗಳುಂಟು. ಪ್ರತ್ಯಕ್ಷ ಪ್ರಮಾಣಗಳನ್ನು ಪರಿಶೀಲಿಸುವುದಾದರೂ, ಇದುವರೆಗೆ ದೊರೆತಿರುವ ಗ್ರಂಥಗಳಲ್ಲಿ ಅತಿಪ್ರಾಚೀನವಾದ 'ಕವಿರಾಜಮಾರ್ಗ'ದಲ್ಲಿ ಅನೇಕ ಸುಪ್ರಸಿದ್ಧರಾದ ಪೂರ್ವ ಕವಿಗಳ ಹೆಸರು ಉಲ್ಲೇಖವಾಗಿದೆ. ಇದರಿಂದ ಕವಿರಾಜ ಮಾರ್ಗವನ್ನು ಬರೆದ ನೃಪತುಂಗನ (814-877) ಕಾಲಕ್ಕೂ ಹಿಂದೆ ಅನೇಕ ಕವಿಗಳು ಕನ್ನಡದಲ್ಲಿ ಪದ್ಯ ಗದ್ಯ ಗ್ರಂಥಗಳನ್ನು ಬರೆದು ಪ್ರಖ್ಯಾತರಾಗಿದ್ದರೆಂದು ತಿಳಿಯುವುದು. ಈ ಗ್ರಂಥದಲ್ಲಿ ಪುರಾತನ ಕಾವ್ಯಗಳಿಂದಾರಿಸಿದ ಅನೇಕ ಪದ್ಯಗಳೂ ದೊರೆಯುತ್ತವೆ. ಕವಿರಾಜ ಮಾರ್ಗವು ಒಂದು ಲಕ್ಷಣ ಗ್ರಂಥ. ಲಕ್ಷ್ಯ ಗ್ರಂಥಗಳಿಲ್ಲದೆ ಲಕ್ಷಣ ಗ್ರಂಥಗಳು ಹುಟ್ಟಲಾರವು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡರೆ, ಕನ್ನಡ ಸಾಹಿತ್ಯವು ಬಹಳ ಪುರಾತನವಾದುದೆಂಬುದು ಸ್ಪಷ್ಟವಾಗುವುದು.

ಕನ್ನಡ ಸಾಹಿತ್ಯವನ್ನು ಜೈನರೂ, ವೀರಶೈವರೂ, ಬ್ರಾಹ್ಮಣರೂ ಪರಿಪೋಷಣೆಮಾಡಿದ್ದಾರೆ. ಒಟ್ಟಿಗೆ ಸುಮಾರು ಸಾವಿರದ ಐನೂರಕ್ಕಿಂತಲೂ ಹೆಚ್ಚು ಮಂದಿ ಕವಿಗಳು ಚಂಪು, ಗದ್ಯ, ಪದ್ಯ, ವಚನ, ಕೀರ್ತನೆ, ಷಟ್ಪದಿ, ಸಾಂಗತ್ಯ ಮುಂತಾದ ರೂಪಗಳಿಂದ ಕನ್ನಡ ಸಾಹಿತ್ಯವನ್ನು ಅಪಾರವಾಗಿ ಬೆಳಸಿದ್ದಾರೆ. ಇದು ಕನ್ನಡಿಗರಿಗೆ ಅಭಿಮಾನದ ಸಂಗತಿಯಾಗಿದೆ. ಕನ್ನಡ ಕವಿಪುಂಗವರಾದ ಪಂಪ, ಪೊನ್ನ, ರನ್ನ, ಜನ್ನ, ನಾಗಚಂದ್ರ, ನೇಮಿಚಂದ್ರ, ಹರೀಶ್ವರ, ರಾಘವಾಂಕ, ಭೀಮಕವಿ, ಷಡಕ್ಷರಿ, ಚಾಮರಸ, ರುದ್ರಭಟ್ಟ, ಕುಮಾರವ್ಯಾಸ, ಲಕ್ಷ್ಮೀಶ, ಪುರಂದರದಾಸ, ಕನಕದಾಸ—ಮೊದಲಾದವರು ತಮ್ಮ ಕೃತಿ ರತ್ನಗಳಿಂದ ಕರ್ನಾಟಕ ಸಾಹಿತ್ಯದೇವಿಯನ್ನು ಚೆನ್ನಾಗಿ ಅಲಂಕರಿಸಿದ್ದಾರೆ. ರಸ, ಭಾವ, ಅಲಂಕಾರ ಮೊದಲಾದುವುಗಳನ್ನು ಗಮನಿಸಿದರೆ ಇವರ ಕಾವ್ಯಗಳು ಬಹಳ ಮೇಲ್ತರದವುಗಳೆಂದು ವಿದಿತವಾಗುವುದು.

ಕನ್ನಡ ಸಾಹಿತ್ಯವು ಪ್ರಾಯಿಕವಾಗಿ ಪದ್ಯ ಸಾಹಿತ್ಯವೆಂದೇ ಹೇಳಬೇಕು. ಹಳಗನ್ನಡದಲ್ಲಿ ಗದ್ಯ ನಾಟಕಗಳು ತೀರ ವಿರಳವಾಗಿವೆ. ಹೀಗೆ ಪದ್ಯಕ್ಕೆ ಮಾತ್ರ ಹಿಂದಣ ಕಾಲದಲ್ಲಿ ಪ್ರಾಶಸ್ತ್ಯವಿದ್ದುದಕ್ಕೆ ಆಕಾಲದ ಜನರ ಮನೋಭಾವನೆಯೇ ಕಾರಣವೆಂದು ಹೇಳಬೇಕು. 'ಪದ್ಯಂ ಸಮಸ್ತ ಜನತಾಹೃದ್ಯಂ' ಎಂಬುದಾಗಿ ನೃಪತುಂಗನು ತನ್ನ ಕವಿರಾಜ ಮಾರ್ಗದಲ್ಲಿ ಆಗಿನ ಜನರ ಮನೋಧರ್ಮವನ್ನೇ ಕುರಿತು ಹೇಳಿರಬೇಕು. ಆಕಾಲದ ಜನರು 'ಪದನಱಿದು ನುಡಿಯಲುಂ ನುಡಿ। ದುದನಱಿದಾರಯಲುಮಾರ್ಪ್ಪರಾ ನಾಡವರ್ಗಳ್ ॥ ಚದುರರ್ ನಿಜದಿಂ ಕುಱಿತೋ। ದದೆಯುಂ ಕಾವ್ಯಪ್ರಯೋಗಪರಿಣತ ಮತಿಗಳ್' ಆಗಿದ್ದರು. ಕರ್ನಾಟಕದಲ್ಲಿ ಜನರಿಗೆ ಈ ಅಭಿಪ್ರಾಯವು ಸುಮಾರು ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗೂ ಇತ್ತೆಂದು ಹೇಳಿದರೆ ತಪ್ಪಾಗದು. ಇದನ್ನು ಬದಲಾಯಿಸಿ ಕನ್ನಡಿಗರಿಗೆ ಗದ್ಯದಲ್ಲಿ ಆಸಕ್ತಿಯುಂಟಾಗುವಂತೆ ಮಾಡಿ ಕೀರ್ತಿಯನ್ನು ಗಳಿಸಿದವರಲ್ಲಿ 'ರಾಮಾಶ್ವಮೇಧ'ದ ಕರ್ತೃವಾದ ನಂದಳಿಕೆ ಲಕ್ಷ್ಮೀನಾರಣಪ್ಪನವರೊಬ್ಬರು. ಅವರು ತಮ್ಮ ಮೂರು ಕಾವ್ಯಗಳಲ್ಲಿ ಎರಡನ್ನು ಗದ್ಯದಲ್ಲಿಯೇ ಬರೆದಿರುವರಲ್ಲದೆ, ರಾಮಾಶ್ವಮೇಧದ ಪೀಠಿಕಾಸಂಧಿಯಲ್ಲಿ 'ಪದ್ಯಂ ವಧ್ಯಂ ಗದ್ಯಂ ಹೃದ್ಯಂ' ಎಂಬುದಾಗಿ ಮನೋರಮೆಯ ಬಾಯಿಂದ ಹೇಳಿಸಿದ್ದಾರೆ. ಆ ಕಾಲಕ್ಕೆ ಪದ್ಯಗ್ರಂಥಗಳು

ವಿಪುಲವಾಗಿ ಬೆಳೆದು ಹೋಗಿದ್ದು ಜನರಿಗೆ ಪದ್ಯದಲ್ಲಿ ಬೇಸರ ಹುಟ್ಟಿರಬೇಕು. ಆದುದರಿಂದಲೇ ಗದ್ಯಕ್ಕೆ ಪ್ರಾಶಸ್ತ್ಯವುಂಟಾಗಲು ಕಾರಣವಾಯಿತು.

ಹಳಗನ್ನಡ ಸಾಹಿತ್ಯದಲ್ಲಿ ನಾಟಕಗಳು ತೀರ ವಿರಳ; ಇಲ್ಲವೆಂದರೂ ತಪ್ಪಾಗದು. ಈಗ ಉಪಲಬ್ಧವಾಗಿರುವ ನಾಟಕಗಳಲ್ಲಿ ಸಿಂಗರಾರ್ಯ ಕೃತ 'ಮಿತ್ರವಿಂದಾ ಗೋವಿಂದ'ವೆಂಬುದೇ ಮೊದಲನೆಯದು. ಇದು ೧೭ನೆಯ ಶತಮಾನದಲ್ಲಿ ಹುಟ್ಟಿತು. ಇದೂ ಸಂಸ್ಕೃತದಲ್ಲಿರುವ ರತ್ನಾವಳೀ ನಾಟಕೆಯ ಭಾಷಾಂತರವಾಗಿದೆ. ಸಂಸ್ಕೃತ ದಲ್ಲಿ ಬಹಳ ಪೂರ್ವಕಾಲದಿಂದಲೂ ಉತ್ತಮ ನಾಟಕ ಗಳು ಬರೆಯಲ್ಪಟ್ಟಿದ್ದರೂ ಕನ್ನಡದಲ್ಲಿ ಮಾತ್ರ ನಾಟಕ ಗಳ ಅಭಾವವು ತಲೆದೋರಲು ಪ್ರಬಲವಾದ ಕಾರಣ ಗಳೇನಾದರೂ ಇರಬೇಕು. ಮತಧರ್ಮಗಳ ಪ್ರಭಾವ ಪ್ರಕರ್ಷವೇ ಇದಕ್ಕೆ ಕಾರಣವಿರಬಹುದು. ಅಂದು ಧಾರ್ಮಿಕ ಯುಗವು ಕರ್ನಾಟಕದಲ್ಲಿ ತಲೆದೋರಿತ್ತು. ಬೌದ್ಧ ಜೈನ ಧರ್ಮಗಳು ವೈದಿಕ ಧರ್ಮವನ್ನು ಮೂಲೆಯ ಪಾಲುಮಾಡುವುದಕ್ಕೆ ಪ್ರಯತ್ನಿಸುತ್ತಿದ್ದವು. ಮತಪ್ರಚಾರಕ್ಕಾಗಿಯೇ ಕನ್ನಡಧಲ್ಲಿ ಕಾವ್ಯಗಳು ತಲೆ ದೋರಿದವು. ಕವಿಗಳು ತಮ್ಮ ಕಾವ್ಯಗಳಲ್ಲಿ ಸ್ವಮತದ ಉತ್ಕೃಷ್ಟತೆಯನ್ನು ತೋರಿಸಿಕೊಡುವ ಸಂದರ್ಭದಲ್ಲಿ ಪರಮತದ ಅಪಕೃಷ್ಟತೆಯನ್ನೂ ತೋರಿಸಿಕೊಡುತ್ತಿ ದ್ದರು. ಜೈನರು ನಾಟಕಗಳನ್ನು ಬಹಿಷ್ಕರಿಸುತ್ತಿದ್ದುದ ರಿಂದ ಜೈನ ಕವಿಗಳು ನಾಟಕರಚನೆಗೆ ಗಮನಕೊಡಲಿಲ್ಲ. ಮಾತ್ರವಲ್ಲದೆ ಜೈನರ ಕಾವ್ಯಗಳಲ್ಲಿ ಶಾಂತರಸಕ್ಕೆ ಪ್ರಾಧಾ ನ್ಯವು ದೊರೆತುದರಿಂದ ಶೃಂಗಾರವೀರಕರುಣಾದಿಪ್ರಧಾನ ವಾದ ನಾಟಕರಚನೆಗೆ ಆಗ ಆಸ್ಪದವಿರಲಿಲ್ಲ. ಹೀಗಾಗಿ ನಾಟಕರಚನೆಯು ಬಿದ್ದುಹೋಗಿರಬೇಕು.

ಇಷ್ಟು ಕನ್ನಡ ಸಾಹಿತ್ಯದ ಸ್ವರೂಪದ ವಿಚಾರ; ಇನ್ನು ಅದರ ಉದ್ದೇಶವೇನೆಂಬುದನ್ನು ವಿಚಾರಮಾಡ ಬೇಕಾಗಿದೆ. ರಸಾತ್ಮಕವಾದ ಕಾವ್ಯಗಳಿಂದ ಜನಸಾಮಾ ನ್ಯಕ್ಕೆ ಹೃದಯಾನಂದವನ್ನುಂಟುಮಾಡುವುದೇ ಸಾಹಿ ತ್ಯದ ಮುಖ್ಯ ಉದ್ದೇಶ. ಕಾವ್ಯಗಳಿಂದ ಆನಂದವುಂಟಾ ಗುವುದಕ್ಕೆ ಅವುಗಳಲ್ಲಿರುವ ರಮಣೀಯತೆಯೇ ಕಾರಣ. ಕವಿಯು ರಮಣೀಯವಾದ ವಿಷಯಗಳನ್ನೆತ್ತಿಕೊಂಡು ರಮಣೀಯವಾದ ಶಬ್ದಗಳಿಂದ ರಮಣೀಯವಾದ ರೀತಿ ಯಲ್ಲಿ ಕಾವ್ಯವನ್ನು ರಚಿಸಿ ಓದುವವರಿಗೆ ಆ... ವನ್ನುಂಟುಮಾಡುತ್ತಾನೆ. ಪ್ರಪಂಚದಲ್ಲಿ ಯಾ... ಅನುಭವಿಸಿದರೆ ನಮಗೆ ಸುಖವಾಗುತ್ತದೆಯೋ ... ಗಳನ್ನು ಕವಿಯು ತನ್ನ ಕಾವ್ಯಗಳಲ್ಲಿ ವರ್ಣಿಸು... ಕವಿಗೆ ಪ್ರಪಂಚಾನುಭವವೂ ಕಲ್ಪನಾಶಕ್ತಿಯೂ ... ಹೆಚ್ಚಾಗಿರುತ್ತದೆಯೋ ಅಷ್ಟು ಹೆಚ್ಚಾಗಿ ಅವನ... ಗಳು ಜನಪ್ರಿಯವಾಗುತ್ತವೆ. ಅವನ ನೂತನ... ವಾಕ್ಪ್ರಪಂಚವು ನಮ್ಮನ್ನು ಆಶ್ಚರ್ಯಗೊಳಿಸಿ ... ಸಾಗರದಲ್ಲಿ ಮುಳುಗುವಂತೆ ಮಾಡುತ್ತವೆ. ... ಇಂತಹ ಅದ್ಭುತ ಶಕ್ತಿಯನ್ನು ನೇಮಿಚಂದ್ರನು ಲೀಲಾವತಿಯೆಂಬ ಕಾವ್ಯದಲ್ಲಿ ಹೀಗೆ ವರ್ಣಿಸಿರುವ...

ಕಟ್ಟುಗೆ ಕಟ್ಟದಿರ್ಕೆ ಕಡಲಂ
ಕಪಿಸಂತತಿ ವಾಮನಕ್ರಮಂ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ
ಹರನಂ ನರನೊತ್ತಿ ಗಂಟಲಂ॥
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್
ಕೃತಿಬಂಧದೊಳಲ್ತೆ ಕಟ್ಟಿದರ್।
ಮುಟ್ಟಿದರೊತ್ತಿ ಮೆಟ್ಟಿದರಿ-
ದೇನಳವಗ್ಗಳವೋ ಕವೀಂದ್ರರಾ।
ಕಿವಿಯಿಂದೀಂಟಿಸುವರ್ ಸಮಸ್ತರಸಮಂ
ತೋರ್ಪರ್ ಸರೋಜಾತಮಂ।
ಯುವತೀ ಪೌಢಲತಾಗ್ರದೊಳ್
ಕುಮುದವೊಂದೊಂದಲ್ಲಿ ಯಾ ಬಾ...
ಲ್ಲವಮಂ ಪುಟ್ಟಿಪರಾರ್ಯ ಮೋಹನ-
ಮುಮಂ ಮಾಳ್ಪೀಚಮತ್ಕಾರಮಂ।
ಕವಿಗಳ್ ಬಲ್ಲವೊಲನ್ಯರೆತ್ತರಿವ-
ರಂತಾ ಬ್ರಹ್ಮನುಂ ಬಲ್ಲನೇ॥
ಮರನೀಗುಂ ಮಣಿಯಾಗುವೊಂದು
ಪಶುವೀಗುಂ ಕೇಳಿವೆಂದೋಳಿಯೊ...
ಪುರುಡಂ ಪುಟ್ಟಿಸಿ ಕಾಷ್ಮಮಂ-
ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್।
ಮರುಳಂ ಪೋ ಪುರುಳಾಗಿಪರ್
ಕಿವಿಗಳೊಳ್ ಪೀಯೂಷಮಂ ಪಿಂ...
ರ್ಮರೆಯೊಳ್ ಸಂದ ಕವಿಪ್ರವೇಕರೆ ವಲಂ
ಬಲ್ಲರ್ ಪೆರರ್ ಬಲ್ಲರೇ॥

ಸ್ಥೂಲವಾಗಿ ನೋಡಿದರೆ ಕಾವ್ಯದ ಉದ್ದೇಶವು ಆನಂದ ವನ್ನುಂಟುಮಾಡುವುದೆಂದು ತೋರಿದರೂ, ಸ್ವಲ್ಪ ಸೂಕ್ಷ್ಮವಿಚಾರಮಾಡಿದರೆ ಕಾವ್ಯದ ಗುರಿಯು ಇಷ್ಟೇ ಅಲ್ಲದೆ ಇನ್ನೂ ಹೆಚ್ಚಾಗಿರುವುದೆಂದು ವ್ಯಕ್ತವಾಗುವುದು. ನೃಪತುಂಗನು ತನ್ನ ಕವಿರಾಜಮಾರ್ಗದಲ್ಲಿ ಈ ವಿಷಯ ವನ್ನು ಸ್ಪಷ್ಟವಾಗಿ ಹೇಳಿದ್ದಾನೆ:

'ಪಾಪಮಿದುಂ ಪುಣ್ಯಮಿದು ಹಿತ। ರೂಪಮಿದಹಿತ ಪ್ರಕಾರಮಿದು ಸುಖಮಿದು ದುಃ। ಖೋಪಾತ್ತಮಿದೆಂ ದಱಿವುಗು। ಮಾ ಪರಮಕವಿಪ್ರಧಾನರಾ ಕಾವ್ಯಂಗಳ್'.

ಇದರಂತೆ ಮಾನವನು ಕಾವ್ಯಗಳಿಂದ ಇಹಪರಸುಖ ಗಳನ್ನು ಪಡೆಯಬಲ್ಲನೆಂದು ತಿಳಿಯುತ್ತದೆ. ಸಮಾಜ ಜೀವನದಿಂದಲೂ, ಸಂಸಾರತಾಪತ್ರಯಗಳಿಂದಲೂ ಬೇಸ ತ್ತಿರುವ ಮಾನವನಿಗೆ ಇವು ಸುಖವನ್ನೂ ಸಂತೋಷ ವನ್ನೂ ಉಂಟುಮಾಡುವುವು; ನೀತಿಯನ್ನು ಬೋಧಿಸು ವುವು; ಧರ್ಮವನ್ನು ತಿಳಿಸುವುವು; ಭಕ್ತಿಯನ್ನು ಹುಟ್ಟಿ ಸುವುವು; ಮೋಕ್ಷಕ್ಕೆ ದಾರಿಯನ್ನು ತೋರಿಸುವುವು. ಕನ್ನಡ ಕವಿಗಳಲ್ಲಿ ಪ್ರತಿಯೊಬ್ಬರೂ ತಮ್ಮ ಕಾವ್ಯಗಳ ಉದ್ದೇಶವನ್ನು ಪೀಠಿಕಾಸಂಧಿಯಲ್ಲಿ ಹೇಳಿಕೊಂಡಿರು ವರು. ಅವರಲ್ಲಿ ಕೇವಲ ಶ್ರೇಯಸ್ಸಿಗಾಗಿಯಾಗಲಿ, ಹಣಕ್ಕಾಗಿಯಾಗಲಿ, ರಾಜಾನುಗ್ರಹಕ್ಕಾಗಿಯಾಗಲಿ ಕಾವ್ಯವನ್ನು ಬರೆದವರು ಅತಿ ವಿರಳ. ನಮ್ಮ ಕವಿಗಳು ಸಾಮಾನ್ಯವಾಗಿ ಧರ್ಮಪ್ರತಿಪಾದನೆಗಾಗಿಯೇ ಕಾವ್ಯ ಗಳನ್ನು ಬರೆದಿರುತ್ತಾರೆ. ಮತಪ್ರಚಾರವೇ ನಮ್ಮ ಕವಿ ಗಳ ಹೆಗ್ಗುರಿಯಾಗಿತ್ತೆಂದು ಹೇಳಬಹುದು. ಆದಿಪಂಪನು ತನ್ನ ಆದಿ ಪುರಾಣದಲ್ಲಿ ಈ ಅಂಶವನ್ನು ಈ ಕೆಳಗಿನಂತೆ ತಿಳಿಸುತ್ತಾನೆ:

ಇದುವೆ ಸುಕವಿಪ್ರಮೋದ। ಪ್ರದಮಿದುವೆ ಸಮಸ್ತ ಭವ್ಯಲೋಕ ಪ್ರಮುದ॥ ಪ್ರದಮೆನೆ ನೆಗೞ್ದಾದಿ ಪುರಾ। ಣದೊಳಱಿವುದು ಕಾವ್ಯಧರ್ಮಮುಂ ಧರ್ಮಮುಮಂ॥

ಕಾವ್ಯ ಧರ್ಮವನ್ನೂ ಜೈನ ಧರ್ಮವನ್ನೂ ಬೋಧಿಸು ವುದಕ್ಕಾಗಿಯೇ ಪಂಪನೂ ಇನ್ನಿತರ ಜೈನ ಕವಿಗಳೂ ತಮ್ಮ ಪುರಾಣಗಳನ್ನೂ ಕಾವ್ಯಗಳನ್ನೂ ಬರೆದಿರುತ್ತಾರೆ. ವೀರಶೈವ ಕವಿಗಳೂ, ಬ್ರಾಹ್ಮಣ ಕವಿಗಳೂ ಇವರ ದಾರಿ ಯನ್ನೇ ಹಿಡಿದು ಮುಂದುವರಿದಿರುತ್ತಾರೆ. ಇವರ ವಾಙ್ಮಯದಲ್ಲಿಯೂ ಮುಕ್ಕಾಲು ಪಾಲು ಧಾರ್ಮಿಕ ವಿಷಯಗಳು ಮೂಡಿವೆ. ಇವರಲ್ಲಿ ಶಿವಶರಣರೂ ಹರಿ ಶರಣರೂ ಭಕ್ತಿಸಾಹಿತ್ಯಕ್ಕೆ ಕಾರಣರಾಗಿರುತ್ತಾರೆ. ಹೀಗಾಗಿ ಓದುವವರ ಅಭಿರುಚಿಯು "ಉಳಿದೊಡಂ ಅಳಿದೊಡಂ ಬಟ್ಟೆದೋರಿಪ ಚರಿತ"ದ ಕಡೆಗೆ ಒಲೆಯು ತ್ತಿತ್ತು. ಗಮಕಿಗಳ ದಿವ್ಯಗಾಯನದಿಂದ ಕನ್ನಡಿಗರೆಲ್ಲರ ಹೃದಯಕ್ಕೂ ಇಳಿದಿರುವ ಕುಮಾರವ್ಯಾಸ ಭಾರತದಲ್ಲಿ ಆದರ ಉದ್ದೇಶದ ಕುರಿತು ಕವಿಯು ಈ ರೀತಿಯಾಗಿ ಹೇಳಿಕೊಂಡಿದ್ದಾನೆ:

"ಅರಸುಗಳಿಗಿದು ವೀರ ದ್ವಿಜರಿಗೆ। ಪರಮವೇದದ ಸಾರ ಯೋಗೀ। ಶ್ವರರ ತತ್ವವಿಚಾರ ಮಂತ್ರೀ ಜನಕೆ ಬುದ್ಧಿಗುಣ॥ ವಿರಹಿಗಳ ಶೃಂಗಾರ ವಿದ್ಯಾಪರಿಣತರ ಲಂಕಾರ...."

ಹೀಗೆ ಸಾಹಿತ್ಯದ ಉದ್ದೇಶವು ನಾನಾಮುಖವಾಗಿರು ವುದನ್ನು ನಾವು ನೋಡಿಯಾಯಿತು. ಕನ್ನಡ ಕವಿಗಳು ತಮ್ಮ ಉದ್ದೇಶಗಳನ್ನು ಹೇಗೆ ಸಾಧಿಸಿರುವರೆಂಬುದನ್ನು ಸ್ವಲ್ಪಮಟ್ಟಿಗೆ ತಿಳಿಸುವುದು ಅವಶ್ಯವಾಗಿದೆ. ಪಂಪ ರನ್ನಾದಿ ಕನ್ನಡ ಕವಿಗಳು ಪ್ರತಿಭಾಸಂಪನ್ನರಾಗಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿ ದೇದೀಪ್ಯಮಾನವಾಗಿ ವಿರಾಜಿಸು ತ್ತಿರುವ ಕಾಳಿದಾಸ, ಭವಭೂತಿ ಮುಂತಾದವರ ಸಾಲಿಗೆ ಸೇರಲು ಯೋಗ್ಯರಾಗಿದ್ದಾರೆ. ಕಾಳಿದಾಸನು ತನ್ನ ಅಭಿ ಜ್ಞಾನ ಶಾಕುಂತಲದಲ್ಲಿ ಕಣ್ವನ ಸಾಕುಮಗಳಾದ ಶಕುಂತ ಲೆಯು ಪತಿಗೃಹಕ್ಕೆಹೊರಡಲನುವಾದಾಗ ಆತನು ಪಡುವ ದುಃಖವನ್ನೂ, ಮಗಳಿಗೆ ಹೇಳುವ ಬುದ್ಧಿವಾದವನ್ನೂ ಬಹಳ ಹೃದಯಂಗಮವಾಗಿ ವರ್ಣಿಸಿರುವಂತೆಯೇ ಪಂಪ ನೂ ಇಂತಹ ಒಂದು ಸನ್ನಿವೇಶವನ್ನು ಬಹಳ ಮನೋ ಹರವಾಗಿ ಚಿತ್ರಿಸಿದ್ದಾನೆ. ಪತಿಯ ಸನ್ನಿಧಿಗೆ ಹೊರಡಲ ನುವಾದ ಮಗಳನ್ನು ಕುರಿತು ಆಕೆಯ ತಂದೆತಾಯಿಗಳು

ಮನಮಱಿದಂಜಿ ಬೆರ್ಚಿ ಬೆಸಕೆಯ್
ನಿಜವಲ್ಲಭನೇನನೆಂದೊಡಂ।
ಕಿನಿಸದಿರೊಂದಿದಗ್ರ ಮಹಿಷೀಪದದಲ್ಲಿ
ಪದಸ್ಥೆಯಾಗು ನಂ॥
ದನರನಗಣ್ಯ ಪುಣ್ಯ ಧನರಂ
ಪಡೆಯೆಂದಮರ್ದಪ್ಪಿಕೊಂಡು ತ।
ತ್ತನುಜೆಯಗಲ್ಕೆಯೊಳ್ ನೆಗಪಿದರ್
ಬಸಮಲ್ಲದ ಬಾಷ್ಪವಾರಿಯಂ॥

ಮಗಳನ್ನು ಕೊಟ್ಟು ಕಳುಹಿಸುವಾಗ ಉಂಟಾಗುವ ಕಷ್ಟವನ್ನು ಈ ರೀತಿ ವರ್ಣಿಸಿದ್ದಾನೆ:

ಪೊಡೆಮಡುವಪ್ಪಿಕೊಳ್ವ ನೆನೆಯುತ್ತಿರಿ
ಮೆಂಬ ಸಮಸ್ತ ವಸ್ತುವಂ ।
ಕುಡುವ ಪಲರ್ಮೆಯಿಂ ಪರಸಿ
ಸೇಸೆಯನಿಕ್ಕುವ ಬುದ್ಧಿವೇಳ್ಪ ಕೆ ॥
ಯ್ಯೆಡೆ ನಿಮಗೆಂದೊಡಂಬಡಿಪ
ನಲ್ಲರಗಲ್ಕೆಗೆ ಕಣ್ಣನೀರ್ಗಳಂ ।
ಮಿಡಿವ ಬಹುಪ್ರಕಾರ ಜನಸಂಕಟ
ಮೊಪ್ಪಿರ್ದ್ದುದಾ ಪ್ರಯಾಣದೊಳ್ ॥

ಪಂಪನ ಕವಿತಾಚಾತುರ್ಯ, ಪ್ರತಿಭೆ, ಶೈಲಿ ಮುಂತಾದವುಗಳನ್ನು ತಿಳಿಯುವುದಕ್ಕೆ ಇನ್ನೂ ಅನೇಕ ನಿದರ್ಶನಗಳನ್ನು ಕೊಡಬಹುದು. ಭೀಷ್ಮನಿಂದ ತಿರಸ್ಕೃತಳಾದ ಅಂಬೆಯು ಸಾಲ್ವಲನಲ್ಲಿಗೆ ಬಂದು ತನ್ನನ್ನು ವರಿಸಬೇಕೆಂದು ಬೇಡಿಕೊಳ್ಳುವಳು. ಆಗ ಸಾಲ್ವಲನು ಅವಳಿಗೆ ಕೊಡುವ ಉತ್ತರವು ಬಹಳ ಚಮತ್ಕಾರವಾಗಿದೆ:

ಬಂಡಣದೊಳೆನ್ನನೋಡಿಸಿ । ಕೊಂಡುಯ್ದಂ ನಿನ್ನ ನಾ ಸರಿತ್ಸುತ ನಾನುಂ ॥ ಪೆಂಡತಿಯೆನಾದೆನದಱಿಂ । ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ ॥

ಕುಂತಿಯು ಒಂದು ದಿನ ಕರ್ಣನಲ್ಲಿಗೆ ಬಂದು ಆತನನ್ನು ಪಾಂಡವರ ಪಕ್ಷಕ್ಕೆ ಬರುವಂತೆ ಕೇಳಿಕೊಳ್ಳುವಳು. ಅವಳು ತನ್ನ ತಾಯಿಯೆಂಬುದನ್ನು ಆತನು ಮೊದಲೇ ತಿಳಿದಿದ್ದನು. ಆದರೆ ಅವಳ ಮಾತಿಗೆ ಒಪ್ಪುವುದಕ್ಕೂ ಅದನ್ನು ತಿರಸ್ಕರಿಸುವುದಕ್ಕೂ ಅವನಿಗೆ ಇಷ್ಟವಿಲ್ಲ. ಆ ಸಮಯದಲ್ಲಿ ಅವನು ಹೇಳುವ ಮಾತು ಬಹಳ ಹೃದಯಂಗಮವಾಗಿದೆ:

ಮಾಂಗುಲಿಗನೆನಾಗಿಯುಮಣ । ಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ ॥ ದಂಗೆನಗೆ ಬಿಸುಡಲಕ್ಕುಮೆ । ನೀಂ ಗಳಪಂಬಲನೆ ಬಿಸುಡಿಮಿನ್ನೆನ್ನೆಡೆಯೊಳ್ ॥

ಕರ್ಣನ ಕುಲದ ಪ್ರಸ್ತಾಪವನ್ನೆತ್ತಿ ಗುರುಗಳಾದ ದ್ರೋಣಾಚಾರ್ಯರು ಕೌರವನ ಮನಸ್ಸನ್ನು ನೋಯಿಸಲು, ಅವನಿಗೆ ಅದನ್ನು ಸಹಿಸಲು ಸಾಧ್ಯವಾಗಲಿಲ್ಲ. ಆದುದರಿಂದ ತನ್ನ ಮಿತ್ರನಾದ ಕರ್ಣನನ್ನು ಸಮಾಧಾನಪಡಿಸುವ ಉದ್ದೇಶದಿಂದ ಕೌರವನು ತನ್ನ ಗುರುಗಳಾದ ದ್ರೋಣಾಚಾರ್ಯರನ್ನೂ ಕೃಪಾಚಾರ್ಯರನ್ನೂ ಕುರಿತು ಈ ರೀತಿಯಾಗಿ ನುಡಿಯುವನು:

ಕುಲಮೆಂಬುದುಂಟೆ ಬೀರಮೆ । ಕುಲಮಲ್ಲದೆ ಕುಲವನಿಂತು ಪಿಕ್ಕದಿರಿಂ ನೀ ॥ ಮೊಲಿದೆಲ್ಲಿ ಪುಟ್ಟಿ ಬಳೆದಿಱೆ । ಕುಲಮಿರ್ದುದೆ ಕೊಡದೊಳಂ ಶರಸ್ತಂಭದೊಳಂ ॥

ಪಂಪನು ವರ್ಣಿಸಿರುವ ರಾಜಸೇವೆಯ ಸುಖಕಷ್ಟಗಳು ಈಗಲೂ ರಾಜಸೇವೆಯಲ್ಲಿ ನಿಯುಕ್ತರಾದ ಪ್ರತಿಯೊಬ್ಬರ ಅನುಭವಕ್ಕೂ ಬರುತ್ತವೆ:

ಕಲಿಯನೆ ಪಂದೆಮಾಳ್ಪ ಕಡು-
ವಂದೆಯನೊಳ್ಗಲಿಮಾಳ್ಪ ತಕ್ಕನಂ ।
ಪೊಲೆಯನೆ ಮಾಳ್ಪ ಮುಂ ಪೊಲೆಯನಂ
ನೆಱಿ ತಕ್ಕನೆ ಮಾಳ್ಪ ತಪ್ಪೊಳ ॥
ಗ್ಗಲಿಸಿ ಪೊರಳ್ದು ಪರ್ವಿದ-
ವಿವೇಕತೆಯಿಂ ನೃಪಚಿತ್ತವೃತ್ತಸಂ ।
ಚಲಮದಱಿಂದವೋಲಗಿಸಿ ಬಾಳ್ವುದೆ
ಕಷ್ಟಮಿಳಾಧಿನಾಥರಂ ॥

ಈ ಕವಿಗೆ ತನ್ನ ದೇಶವಾದ ಬನವಾಸಿಯಮೇಲಿದ್ದ ಅಸದೃಶವಾದ ಪ್ರೀತಿಯನ್ನು ಅವನು ಈ ರೀತಿಯಾಗಿ ಹೇಳಿಕೊಂಡಿದ್ದಾನೆ:

ತೆಂಕಣಗಾಳಿ ಸೋಂಕಿದೊಡ
ಮೊಳ್ನುಡಿಗೆಯ್ದೊಡಮಿಂಪನಾಳ್ದ ಗೇ ।
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆ
ಗಂಡೊಡಮಾದ ಕಂದಲಂ ॥
ಪಂ ಕೆಳೆಗೊಂಡೊಡಂ ಮಧುಮಹೋತ್ಸವ
ಮಾದೊಡಮೇನನೆಂಬೆನಾ ।
ರಂಕುಸಮಿಟ್ಟೊಡಂ ನೆನೆವುದೆನ್ನ
ಮನಂ ಬನವಾಸಿ ದೇಶಮಂ ॥

ಕರ್ನಾಟಕ ಕವಿಚಕ್ರವರ್ತಿಗಳಲ್ಲಿ ಒಬ್ಬನೂ, ಸರಸಕವಿಯೂ, ಸಾರಸ್ವತಮೆನಿಪ ಕವಿತೆಯಲ್ಲಿ ವಾಗ್ದೇವಿಯ ಭಂಡಾರದ ಮುದ್ರೆಯನ್ನು ಒಡೆದವನೂ ಆದ ಕವಿರತ್ನನು ತನ್ನ ಗದಾಯುದ್ಧದಲ್ಲಿ ಕರುಣರಸಪೂರಿತವಾದ ಸನ್ನಿವೇಶಗಳನ್ನು ಚಿತ್ರಿಸಿರುವ ರೀತಿಯು ಬಹಳ ಶ್ಲಾಘ್ಯವಾಗಿದೆ. ಯುದ್ಧರಂಗದಲ್ಲಿ ಸಂಜಯ ದ್ವಿತೀಯನಾಗಿ ಕೌರವನು ಸಂಚರಿಸುತ್ತಿರಲು, ಮೊದಲು ತನ್ನ ತಮ್ಮನಾದ ದುಶ್ಶಾಸನನ ಕಳೇಬರವನ್ನೂ, ಬಳಿಕ ತನ್ನ ಪರಮಮಿತ್ರನಾದ ಅಂಗರಾಜನ ಶವವನ್ನೂ ನೋಡುವನು. ಆಗ ಅವನ ದುಃಖವು ಉಕ್ಕಿಹರಿಯುವುದು.

ಅವನ ಶೋಕಪ್ರಕಾರವನ್ನು ಕವಿಯು ಕೆಳಗಿನಂತೆ ಬಣ್ಣಿಸಿರುವನು:

ಆನುಂ ದುಶ್ಶಾಸನನುಂ। ನೀನುಂ ಮೂವರೆ ದಲಾತನುಂ ಕಟಿದ ಬಟಿ॥ ಕ್ಕಾನುಂ ನೀನೆ ದಲೀಗಳ್। ನೀನುಂ ಮಗುಳ್ದೆತ್ತವೋದೆಯಂಗಾಧಿಪತೀ॥

ನೀನಿಲ್ಲದರಸುಗೆಯ್ವೆನೆ। ನೀನಿಲ್ಲದೆ ಬಾಟ್ವೆನೆಂದು ಬಗೆದಪ್ಪೆನೆನಾಂ॥ ನೀನಿಲ್ಲದಹಿತರೊಳ್ ಸಂ। ಧಾನಂ ಮಾಡುವೆನೆ ಕೂಡೆನಂಗಾಧಿಪತೀ॥

ನಿನ್ನ ಕೆಳೆಯಂ ಸುಯೋಧನ। ನನ್ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ॥ ನೆನ್ನದೆ ಜೀಯೆನ್ನದೆ ದೇ। ವೆನ್ನದೆ ಯೇಕುಸಿರದಿರ್ಪೆಯಂಗಾಧಿಪತೀ॥

ನೀನುಳ್ಳೊಡುಂಟು ರಾಜ್ಯಂ। ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟೈ॥ ನೀನುಳ್ಳೊಡುಂಟು ಪೀಟಿಗೆ। ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ॥

ನಯನದೊಳಮರ್ದೆಯೊಳಂ ನಿ। ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ॥ ನ್ನಯ ಕಿವಿಯೊಳಗಿನನಂದನ। ವಿಯೋಗವೆಂತಾದುದಱಿಯೆನಂಗಾಧಿಪತೀ॥

ಇನ್ನೊಂದು ಸಂದರ್ಭದಲ್ಲಿ ಕೌರವನ ತಂದೆ ತಾಯಿಗಳು ದುಃಖಿಸುತ್ತ ಆತನಲ್ಲಿಗೆ ಬರುತ್ತಿರುವುದನ್ನು ಕೇಳಿ ಅವನು ಬಹಳ ಚಿಂತಾಕ್ರಾಂತನಾಗಿ, ವಿಧಿಯನ್ನು ಬೈದು ಹಳಯಿಸುತ್ತಿರುವುದನ್ನು ಕೇಳುವಾಗ ಎಂತಹ ಕಠಿಣ ಹೃದಯವಾದರೂ ಕರಗದಿರದು:

ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ
ತೂರ್ಯಸ್ವನಂ ಪೊಣ್ಮೆ ಸೋ।
ದರರುಂ ಮಕ್ಕಳುಮಾಪ್ತರುಂ ಬೆರಸು
ಬಂದಾನಂದದಿಂ ಕಾಣ್ಬೆನೆಂ॥
ದಿರಲಿಂತಾಯ್ತು ವಿಧಾತ್ರ!
ಮದ್ಗುರುಗಳಂ ದುಃಖಾತ್ಮರಂ ಶೋಕತ।
ಪ್ತರರಂ ಮೆಯ್ಯೊಳಿ ಬೀೞ್ವುದಶ್ರು
ಮುಖರಂ ಕಾಣ್ಬಂತುಟಂ ಮಾಡಿದೈ॥

ಕಂದ ನಿಜಾನುಜರೆಲ್ಲಿದ। ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ॥ ನೆಂದು ಮಱುಮಾತುಗುಡುವೆಂ। ಕೊಂದರ್ಕೌಂತೇಯರೆಂದು ಬಿನ್ನೈಸುವೆನೋ॥

ರನ್ನನು ಶೋಕರಸವನ್ನು ಚಿತ್ರಿಸಿರುವಂತೆಯೇ ನಾಗಚಂದ್ರನೂ ಮಾಡಿದ್ದಾನೆ. ಅವನು ತನ್ನ ರಾಮಚಂದ್ರ ಚರಿತ ಪುರಾಣದಲ್ಲಿ ಸೀತೆಯನ್ನು ಕಳೆದುಕೊಂಡ ರಾಮನ ಪ್ರಲಾಪವನ್ನು ಎಷ್ಟು ಮರ್ಮಭೇದಕವಾಗುವಂತೆ ವರ್ಣಿಸಿರುವನೆಂಬುದನ್ನು ಕೆಳಗಿನ ಪದ್ಯದಿಂದ ತಿಳಿಯಬಹುದು:

ಕಳಹಂಸಾಲಸಯಾನೆಯಂ
ಮೃಗಮದಾಮೋದಾಸ್ಯನಿಶ್ವಾಸೆಯಂ।
ತಳಿರೇ ತಾವರೆಯೇ ಮದಾಳಿ
ಕುಲಮೇ ಕರ್ನೈದಿಲೇ ಮತ್ತ ಕೋ॥
ಕಿಳಮೇ ಕಂಡಿರೆ ಪಲ್ಲವಾಧರೆಯ
ನಂಭೋಜಾಸ್ಯೆಯಂ ಭೃಂಗಕುಂ।
ತಳೆಯಂ ಕೈರವನೇತ್ರೆಯಂ
ಪಿಕರವ ಪ್ರಖ್ಯಾತೆಯಂ ಸೀತೆಯಂ॥

ಇಲ್ಲಿಯ ಪದಜೋಡಣೆಯು ಬಹಳ ಚೆನ್ನಾಗಿದೆ; ಪದ್ಯವನ್ನು ಓದುವಾಗ ಅಳುವಂತೆ ಭಾಸವಾಗುತ್ತದೆ.

ಹೀಗೆ ಕರುಣರಸವನ್ನು ವರ್ಣಿಸಿರುವ ಕವಿಯು ಹಾಸ್ಯರಸಸನ್ನಿವೇಶಗಳನ್ನೂ ಕಲ್ಪಿಸಬಲ್ಲನು. ಸೀತಾಸ್ವಯಂವರ ಕಾಲದಲ್ಲಿ ನಾರದನು ಸೀತೆಯನ್ನು ಕುತೂಹಲದಿಂದ ನೋಡಬಂದು ಅವಮಾನಹೊಂದಿ ಓಡಿಹೋದ ವರ್ಣನೆಯು ಬಹಳ ಮನೋಹರವಾಗಿದೆ:

ಜನಕಂ ತನುಜೆಯನಿತ್ತಂ। ಮನುವಂಶಲಲಾಮನಪ್ಪ ರಾಮಂಗೆಂಬೀ॥ ಜನವಾರ್ತೆಗೇಳ್ದು ನಾರದ। ಮುನಿ ಗಾದುದು ನೋಟ್ಪ ಕೌತುಕಂ ಜಾನಕಿಯಾ॥

ಪೆಂಡಿರ ಲೀಲೆಯಂ ಯತಿಗೆ ನೋಟ್ಪುದು
ಪಾಟಿಯೆ ಮೌಂಜಿ ಕಚ್ಚಟಂ।
ಗುಂಡಿಗೆ ಬೋಳಮುಂಡೆ ಮಣಿದಂಡ
ಮಿವೀಕ್ಷಣ ಸೌಖ್ಯಹೇತುವೇ॥
ಕಂಡೊಡೆ ಬಾಲೆಯರ್ ತಮಗೆ
ಪೇಸದೆ ಮಾಣ್ಬರೆ ನಾರದಂ ಮರು।
ಳ್ಗೊಂಡವೊಲಾಗಸಕ್ಕೆ ನೆಗೆದಂ
ವೃಥೆಯಲ್ತೆ ಸರಾಗಸಂಯಮಂ॥

ಹೀಗೆ ಹಾಸ್ಯರಸವನ್ನು ಉಕ್ಕಿಸುವ ಕವಿಯೇ ಒಳ್ಳೆಯ ನೀತಿಯನ್ನೂ ಹೇಳಿದ್ದಾನೆ. ಗುಣದ ಮೇಲ್ಮೆಯನ್ನು ಕುರಿತು ಅವನು ಹೀಗೆ ಹೇಳಿದ್ದಾನೆ:

ಗುಣಹಾನಿಯಿಂದಧೋಗತಿ। ಗುಣದಿಂ ಸ್ವರ್ಗಾಪವರ್ಗಸುಖಮುಕ್ಕುಮೆನಲ್॥ ಗುಣಹೀನನ ಸಿರಿಯಿಂದಂ। ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೆ॥

ದುರ್ಜನರ ಸಹವಾಸದ ಪರಿಣಾಮವನ್ನು ಕುರಿತು ನಯಸೇನನು

ಆರಯ್ದು ನೋಡೆ ತೊಱೆಗಳ। ನೀರುಂ ವಾರಿಧಿಯ ನೀರಪೊರ್ದುಗೆಯಿಂದಂ ॥ ಸಾರಂಗೆಟ್ಟುಪ್ಪಪ್ಪುವೊ। ಲಾರುಂ ದುರ್ಜನರ ಸಂಗದಿಂದಂ ಕಿಡರೇ ॥

ಎಂದು ಹೇಳಿದ್ದಾನೆ.

ಕನ್ನಡ ಕವಿಗಳು ಧರ್ಮಪ್ರಚಾರಕ್ಕೂ ನೀತಿಬೋಧೆಗೂ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ. ಹರಿದಾಸರೂ ಶಿವಶರಣರೂ ತಮ್ಮ ಹಾಡುಗಳಲ್ಲಿಯೂ ವಚನಗಳಲ್ಲಿಯೂ ಭಕ್ತಿ ಮತ್ತು ನೀತಿಗಳನ್ನು ಬೋಧಿಸಿ ಸಾಹಿತ್ಯ ಸೇವೆಯೊಡನೆ ಸಮಾಜ ಸೇವೆಯನ್ನೂ ಮಾಡಿದ್ದಾರೆ. ದೇವರಭಕ್ತನು ಯಾವ ಯಾವ ಭಾವನೆಗಳನ್ನು ತಳೆಯಬಹುದೋ ಅವೆಲ್ಲವನ್ನೂ ಹರಿಹರಶರಣರು ಹೃದಯಂಗಮವಾಗಿ ವಿವರಿಸಿದ್ದಾರೆ. ಸಮಾಜದ ಕುಂದುಕೊರತೆಗಳನ್ನು ಬಯಲಿಗೆಳೆದು, ಸಮಾಜದಲ್ಲಿ ಬೇರೂರಿದ್ದ ವಿಷವೃಕ್ಷಗಳನ್ನು ನಿರ್ಮೂಲಮಾಡಲು ಸಾಧಕವಾದ ಹಿತವಚನಗಳನ್ನು ಹೇಳಿರುವರು. ಇವರ ಸಾಹಿತ್ಯದಲ್ಲಿ ಸಿಕ್ಕದ ಶಾಸ್ತ್ರವಿಲ್ಲ; ಪುರಾಣವಿಲ್ಲ; ಧರ್ಮವಿಲ್ಲ; ಕರ್ಮವಿಲ್ಲ; ನೀತಿಯಿಲ್ಲ; ಭಕ್ತಿಯಿಲ್ಲ. ಹರಿದಾಸ ಹಾಡುಗಳು ರಾಗಯುಕ್ತವೂ ತಾಳಬದ್ಧವೂ ಆಗಿದ್ದು, ಜನರಿಗೆ ಹೆಚ್ಚು ಹೃದಯಂಗಮವಾಗಿವೆ. ಅವರು ಸಾಹಿತ್ಯ, ಸಂಗೀತ— ಈ ಎರಡು ಕ್ಷೇತ್ರಗಳಲ್ಲಿಯೂ ಕೆಲಸಮಾಡಿ ಖ್ಯಾತಿಯನ್ನು ಗಳಿಸಿದ್ದಾರೆ.

ಬಾಲಲೀಲೆಯನ್ನು ಅನೇಕ ಕವಿಗಳು ಅನೇಕ ರೀತಿಯಲ್ಲಿ ವರ್ಣಿಸಿದ್ದಾರೆ. ಶ್ರೀ ಕೃಷ್ಣನು ಶಿಶುವಾಗಿರುವಾಗ ತಾಯಿಯಾದ ಯಶೋದೆಯೊಡನೆ ಯಾವ ರೀತಿ ವ್ಯವಹರಿಸುತ್ತಿದ್ದನೆಂಬುದನ್ನು ರುದ್ರಭಟ್ಟ ಮಹಾಕವಿಯು ಬಹಳ ಸೊಗಸಾಗಿ ಹೇಳಿದ್ದಾನೆ. ಅವರ ಸಂಭಾಷಣೆಯ ಸಾರವನ್ನು ಕವಿಯ ಮಾತುಗಳಿಂದ ತಿಳಿಸುವುದೇ ಯುಕ್ತವಾಗಿದೆ:

ಕಥೆಯಂ ಕೇಳಿಲೆ ಕಂದ ಹುಂ!
ರಘುಜನೆಂಬಂ ಹುಂ! ಸಕಾಂತಂ ವನ।
ಸ್ಥಿತನಾದಂ ಗುರುಪೇೞೆ ಹುಂ!
ದಶಶಿರಂ ಕೊಂಡುಯ್ದನಾ ರಾಮನಾ ॥
ಸತಿಯಂ ತಾನೆನೆ ಪೂರ್ವಮಂ ನೆನೆದು
ಹುಂ ಹುಂ ಕೊಳ್ಳದುತ್ಕೋಪ ಹೂಂ।
ಕೃತಿಯಂ ಮಾಡುತಮೌಂಡುಗಚ್ಚಿ
ಕಿಸುಗಣ್ಣಿಟ್ಟಚ್ಯುತಂ ರಂಜಿತಂ ॥

ಇನ್ನೊಂದು ಸಂದರ್ಭದಲ್ಲಿ ಬಲರಾಮನ ಮಾತನ್ನು ಕೇಳಿ ಯಶೋದೆಯು

'ಹರಿ ನೀಂ ಮಣ್ತಿಂದೆ! ತಿನ್ನೆಂ ಜನನಿ!
ಪುಸಿದನೆಮ್ಮಗ್ರಜಂ! ತೋರುವಕ್ತ್ರಂ।
ತರಮಂ ನೋಡೆಂದು ಬಾಯಂ ತೆಱೆವುದು
ಮದಱೊಳ್ ವಾರ್ಧಿಯೇೞುಂ ಕುಳೋರ್ವೀ।
ಧರವೇೞುಂ ದ್ವೀಪವೇೞುಂ ಬೆರಸು
ಜಗಮನೀರೇೞುಮಂ ಕೂಡೆ ಕಂಡ।
ಚ್ಚರಿವಟ್ಟಿಂ ಮುಚ್ಚುಮುಚ್ಚಾನನ
ಮನೆನುತುಮಾಕಾಂತೆ ವಿಭ್ರಾಂತೆಯಾದಳ್।

ಮಕ್ಕಳಿಲ್ಲದವರು ಪಡುವ ಕಷ್ಟವನ್ನೂ ಮಕ್ಕಳಿಂ ಪಡೆಯಬಹುದಾದ ಸುಖವನ್ನೂ ಪಂಡಿತ ಪಾಮರ ರಂ ಕನೂ ಕನ್ನಡಿಗರ ಅಚ್ಚುಮೆಚ್ಚಿನ ಕವಿಯೂ ಆದ ಲಕ್ಷ್ಮೀಶನು

ಕಂದನಾಡುವ ಬಾಲಲೀಲೆಯಂ ನೋಡಿ ತೊದ। ಳೊ ದಿದಿನಿವಾತನುರೆಕೇಳ್ದು ಮುದ್ದಿನ ಮುದ್ದೆ। ಯಂ ದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ ಕೆಂಗುರು ಳ್ಗಳಲೆವ ॥ ಮುಂದಲೆಯ ಕಂಪನಾಘ್ರಾಣಿಸಿ ತೊಡೆ ಜೊಲ್ಲ। ಚೆಂದುಟಿಯ ಬಾಯ್ದೆರೆಯನೆಯ್ದೆ ಚುಂಬಿ ಸೊಗಸು। ಗುಂದದಾಯೆಂದು ಪಂಚೇಂದ್ರಿಯ ಪ್ರೀತಿ ಯಂ ಪಡೆವರಿನ್ನಾವ ಕೃತರೋ ॥

ಎಂದು ಬಹಳ ಮನೋಹರವಾಗಿ ತನ್ನ ಕಾವ್ಯದ ವರ್ಣಿಸಿದ್ದಾನೆ.

ಕನ್ನಡದಲ್ಲಿ ಸ್ತ್ರೀಯರೂ ಉತ್ತಮವಾದ ಕಾವ್ಯಗಳನ್ನು ಬರೆದಿರುತ್ತಾರೆಂಬುದು ಬಹಳ ಅಭಿಮಾನಾಸ್ಪದವಾ ವಿಷಯವಾಗಿದೆ. ಹೆಂಗಸರಿಗೆ ಹದಿಬದೆಯ ಧರ್ಮವನ್ನು ಬೋಧಿಸಿದ ಸಂಚಿಯ ಹೊನ್ನಮ್ಮನು ಹೆಂಗಸರನ್ನು ತಿರಸ್ಕರಿಸುವವರನ್ನು ಕುರಿತು ಈ ರೀತಿಯಾಗಿ ಸಾಂಗತ್ಯದಲ್ಲಿ ಹಾಡಿದ್ದಾಳೆ:

ಹೆಣ್ಣಲ್ಲವೆ ನಮ್ಮನೆಲ್ಲ ಪಡೆದ ತಾಯಿ।
ಹೆಣ್ಣಲ್ಲವೆ ಪೊರೆದವಳು ॥

ಹೆಣ್ಣುಹೆಣ್ಣೆಂದೇತಕೆ ಬೀಳುಗಳೆವರು ।
ಕಣ್ಣುಕಾಣದ ಗಾವಿಲರು ॥

ಹೀಗೆ ಕನ್ನಡ ಸಾಹಿತ್ಯವಾಹಿನಿಯು ನಾನಾಮುಖವಾಗಿ ಹರಿದು ಜನರಿಗೆ ಆನಂದ, ಅನುಭವ, ಶಾಸ್ತ್ರಜ್ಞಾನ, ನೀತಿಬೋಧೆ, ಭಕ್ತಿಮಾರ್ಗ, ಮೋಕ್ಷಸಾಧನೆ ಮುಂತಾದುವುಗಳನ್ನು ಒದಗಿಸಿಕೊಟ್ಟಿರುತ್ತದೆ. ಅದು ತನ್ನ ಉದ್ದೇಶವನ್ನು ಸಾಫಲ್ಯಮಾಡಿಕೊಂಡಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಆದುದರಿಂದ ಅನುಭವಾಮೃತವನ್ನು ಬರೆದ ಮಹಾಲಿಂಗರಂಗನೊಡನೆ

'ಸುಲಿದ ಬಾಳೆಯಹಣ್ಣಿನಂದದಿ । ಕಳಿದ ಸಿಗುರಿನ ಕಬ್ಬಿನಂದದಿ । ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ ॥ ಲಲಿತವಹ ಕನ್ನಡದ ನುಡಿಯಲಿ । ತಿಳಿದು ತನ್ನೊಳು ತನ್ನ ಮೋಕ್ಷವ । ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ॥

ಎಂಬುದಾಗಿ ಹಾಡಿ ಈ ಲೇಖನವನ್ನು ಮುಗಿಸುವೆನು.

ಎಂ. ಗೋವಿಂದರಾವ್, ಎಂ.ಎ.,
ಲಯೊಲಾ ಕಾಲೇಜು, ಮದರಾಸು

# ಕರ್ನಾಟಕ ಪ್ರಾಂತದ ಏಕೀಕರಣ

[ಸಪ್ರೂಸಂಧಾನ ಸಮಿತಿಯು ಪ್ರಶ್ನಾವಳಿಗೆ ಕರ್ನಾಟಕ ಏಕೀಕರಣ ಸಂಘದ ಅಧ್ಯಕ್ಷ ಶ್ರೀ ಕೆ. ಬಿ. ಜಿನರಾಜ ಹೆಗ್ಗಡೆ, ಬಿ.ಎಸ್ಸಿ., ಎಲ್‌ಎಲ್.ಬಿ., ಎಂ.ಎಲ್.ಎ. (ಸೆಂಟ್ರಲ್) ಇವರು ಕಳುಹಿದ ಉತ್ತರ]

**ಪ್ರಶ್ನಾವಳಿಯ ಭಾಗ I–II**

ಈ ಪ್ರಶ್ನೆಗಳು ಸಂಘದ ಪರಿಮಿತಿಯಿಂದ ಹೊರಗಾಗಿರುವುವು. ಇತರ ಎಲ್ಲಾ ಪ್ರಾಂತಗಳಿಗೂ ಅನ್ವಯಿಸುವ ಈ ವಿಷಯದಲ್ಲಿ ಈ ಹಿಂದೆ ಸಂಘದ ಅಭಿಪ್ರಾಯವನ್ನು ತಿಳಿಯುವ ಪ್ರಯತ್ನ ಮಾಡಿಲ್ಲ. ಆದಕಾರಣ ಈ ಪ್ರಶ್ನೆಗಳಿಗೆ ನಾವು ಉತ್ತರ ಕೊಡದೆ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್, ಹಿಂದೂಮಹಾಸಭೆ, ಮುಸ್ಲಿಂ ಲೀಗಿನಂತಹ ಅಖಿಲಭಾರತ ಸಂಸ್ಥೆಗಳಿಗೆ ಆ ಕೆಲಸವನ್ನು ಬಿಟ್ಟಿರುತ್ತೇವೆ.

**ಭಾಗ III**

ಸಂಸ್ಥಾನಗಳಲ್ಲಿ ಹೊಣೆಗಾರ ಪ್ರಜಾತಂತ್ರಾತ್ಮಕ ಸರಕಾರಗಳು ಸ್ಥಾಪಿಸಲ್ಪಟ್ಟರೆ, ಮತ್ತು ಬ್ರಿಟಿಷ್ ಹಿಂದುಸ್ಥಾನದ ಪದ್ಧತಿಯಂತೆ ಪ್ರಜೆಗಳಿಂದಲೇ ಸಂಯುಕ್ತ ಸರಕಾರಕ್ಕೆ ಆಯಾ ಸಂಸ್ಥಾನಗಳ ಪ್ರತಿನಿಧಿಗಳನ್ನು ಆರಿಸುವುದಾದರೆ ಮಾತ್ರ ಅಂತಹ ಸಂಸ್ಥಾನಗಳನ್ನು ಅಖಿಲಭಾರತ ಯೂನಿಯನ್ನಿನಲ್ಲಿ ಸೇರಿಸಿಕೊಳ್ಳಬಹದು.

**ಭಾಗ IV ಪ್ರಶ್ನೆ ೧–೨–೩**

ಭಾಗ I–II ರಲ್ಲಿ ಹೇಳಿದ ಕಾರಣಗಳಿಂದ ಈ ಭಾಗಕ್ಕೆ ಉತ್ತರಕೊಡಲು ನಾವು ಪ್ರವರ್ತಿಸುವುದಿಲ್ಲ.

**ಭಾಗ–IV–೪**

ದೇಶದ ಐಕ್ಯಕ್ಕೆ ಭಂಗವನ್ನುಂಟುಮಾಡದೆ, ಅದರ ಸಂಸ್ಕೃತಿಯ ಮತ್ತು ಸಾಮಾಜಿಕ ಐಕ್ಯವನ್ನು ಪ್ರೋತ್ಸಾಹಿಸಿ, ದೇಶದ ಸರ್ವತೋಮುಖವಾದ ಉನ್ನತಿಗೆ ಸಾಧಕವಾಗುವಂತೆ ಕರ್ನಾಟಕದ ಹರಿಹಂಚಾದ ಭಾಗಗಳನ್ನು ಒಂದುಗೂಡಿಸಿ, ಸಮಸ್ತ ಕನ್ನಡಿಗರ ಏಕತೆಯನ್ನು ಸಾಧಿಸಿ, ಅವರನ್ನು ಒಂದೇ ಪ್ರಜಾತಂತ್ರಾತ್ಮಕ ಹೊಣೆಗಾರ ಆಡಳಿತೆಯಲ್ಲಿ ಸಮಾವೇಶಗೊಳಿಸುವುದೇ ಈ ಏಕೀಕರಣ ಸಂಘದ ಉದ್ದೇಶವಾಗಿದೆ.

ತಾ॥ ೨೫–೧೨–೧೯೪೪ ರಲ್ಲಿ ಧಾರವಾಡದಲ್ಲಿ ನನ್ನ ಅಧ್ಯಕ್ಷತೆಯಲ್ಲಿ ಜರಗಿದ ೯ನೆಯ ಏಕೀಕರಣ ಸಮ್ಮೇಳನದಲ್ಲಿ ಈ ಕೆಳಗಿನ ನಿರ್ಣಯಗಳು ಮಂಜೂರಾದುವು. ಸಮಿತಿಯ ಅವಗಾಹನೆಗಾಗಿ ಅವುಗಳನ್ನು ಇಲ್ಲಿ ಉದ್ಧರಿಸಲಾಗಿದೆ:

"ಇತಿಹಾಸ, ಸಂಸ್ಕೃತಿ, ಸಾಹಿತ್ಯ, ಕಲೆ–ವೈಭವ, ಆಡಳಿತೆ, ಆರ್ಥಿಕೋದ್ಯಮ, ವ್ಯವಸಾಯಗಳಲ್ಲಿ ಎಂದಿನಿಂದಲೂ ಅಖಂಡವಾದ ಒಂದೇ ಒಂದು ಪರಂಪರೆಯುಳ್ಳ ಕರ್ನಾಟಕವು ಹಿಂದೂಸ್ಥಾನದಲ್ಲಿ ಬ್ರಿಟಿಷರ ಆಳಿಕೆ ನೆಲೆಗೊಳ್ಳುವಾಗ ಕಾರಣಾಂತರಗಳಿಂದ ಬೇರೆ ಬೇರೆ ಪ್ರಾಂತ ಆಡಳಿತಗಳಲ್ಲಿ ಹರಿದು ಹಂಚಿಹೋಗಿ (೧) ಇಂದು ಕರ್ನಾಟಕದಲ್ಲಿ ತುಂಡಾದ ಚಿಕ್ಕ ಚಿಕ್ಕ ಭಾಗಗಳು ಪರ ಸಂಸ್ಕೃತಿಯ ಹೊಡೆತಕ್ಕೆ ಸಿಕ್ಕು ಆತ್ಮವಿಕಾಸಕ್ಕೆ ಭಂಗಬಂದಿರುವದರಿಂದ; (೨) ರಾಜಕೀಯ ದೃಷ್ಟಿಯಿಂದ ಜನಜಾಗೃತಿ ಮತ್ತು ಸಾಂಘಿಕ ಶಕ್ತಿ ಇವೆರಡೂ ಲಾಭದಾಯಕವಾದಂಥಾದ್ದರಿಂದ; (೩) ಆರ್ಥಿಕ ದೃಷ್ಟಿಯಿಂದ ಕರ್ನಾಟಕದ ಅಪಾರ ಭೂ ಜಲ ಕಾನನ ಸಂಪತ್ತು ಕನ್ನಡಿಗರ ಅದರಂತೆಯೇ ಭಾರತದ ಬಲಕ್ಕೆ ಪೋಷಕವಾಗದೆ ಇದ್ದುದರಿಂದ; (೪) ಆಡಳಿತೆಯ ದೃಷ್ಟಿಯಿಂದ ಶಿಕ್ಷಣ ಮೊದಲಾದವುಗಳಲ್ಲಿ ನೇಮಕವಾಗುವ ಅಧಿಕಾರಿಗಳಲ್ಲಿ ಕನ್ನಡೇತರರ ಪ್ರಾಬಲ್ಯವೇ ಹೆಚ್ಚಾಗಿದ್ದರಿಂದ; (೫) ಭಾಷೆಯ ದೃಷ್ಟಿಯಿಂದ ನಾಡಿಗರ ನಾಡನುಡಿಗಳಿಗೆ ಮನ್ನಣೆ ಇಲ್ಲದಂತಾಗಿದ್ದರಿಂದ; ಕಳೆದ ೨೪ ವರ್ಷಗಳಿಂದ ಮುಂಬಯಿ, ಮದರಾಸು ಶಾಸನ ಸಭೆಗಳಲ್ಲಿ ಸ್ವೀಕೃತವಾದ ಅದರಂತೆಯೇ ಒಂದು ಲಕ್ಷ ಕನ್ನಡಿಗರು ಮನವಿಯಲ್ಲಿ ಬೇಡಿದ ಸರ್ವ ಪಕ್ಷೀಯ ಮುಂದಾಳುಗಳಿಂದ ಒಮ್ಮತದಿಂದ ಮುಂದೆ ಮಾಡಲ್ಪಟ್ಟ ಕರ್ನಾಟಕದ ಎಲ್ಲ ಭಾಗಗಳ ಸಾಂಸ್ಕೃತಿಕ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳೆಲ್ಲ ಒಕ್ಕೊರಲಿನಿಂದ ಪ್ರಾರ್ಥಿಸಿದ ಏಕೀಕರಣವು ಸರಕಾರದವರೇ ವಂಗ ವಿಭಜನೆಯನ್ನು ತಿದ್ದುವಾಗಲೂ ಮಾಂಟಿಫರ್ಡ ಸುಧಾರಣೆಗಳ ಮತ್ತು ಸೈಮನ್ ಕಮೀಷನದ ಕಾಲದಲ್ಲೂ ಭಾಷಾನ್ವಯ ಪ್ರಾಂತ ರಚನೆಯ ತತ್ವವನ್ನು ಒಪ್ಪಿಕೊಂಡಿರುವಾಗ ಈ ಸಮ್ಮೇಳನವು ಬ್ರಿಟಿಷ್ ಮತ್ತು ಸಂಸ್ಥಾನ ಎಂಬ ಭೇದಭಾವವಿಲ್ಲದೆ ಕನ್ನಡ ಜನಾಂಗವೆಲ್ಲ ಒಂದೇ ಎಂದೂ ಅಖಂಡ ಕರ್ನಾಟಕ

ನಿರ್ಮಾಣವೇ ತನ್ನ ಧ್ಯೇಯವೆಂದೂ ಸಾರಿ ಒಂದೇ ಪ್ರಜಾಸತ್ತೆಯ ರಾಜ್ಯದಾಡಳತೆಯ ಕೆಳಗೆ ಬಾರದೆ ಕರ್ನಾಟಕದ ಉದ್ಧಾರವೇ ಆಗದೆಂದು ಮನಗಂಡು ಈ ಧ್ಯೇಯ ಕೈಗೂಡುವವರೆಗೆ ಈ ಹೋರಾಟವನ್ನು ನಿಲ್ಲಿಸಲಿಕ್ಕಿಲ್ಲ ಎಂಬ ದೃಢನಿಶ್ಚಯದಿಂದ ಮುಂಬರುವ ಯಾವದೇ ಭಾರತೀಯ ರಾಜ್ಯ ಘಟನೆಯಲ್ಲಿ ಈ ಧ್ಯೇಯಕ್ಕೆ ಸಮಾಧಾನವಾಗದಂತಹ ಯಾವ ಘಟನೆಯೂ ಕನ್ನಡಿಗರಿಂದ ಸ್ವೀಕರಿಸಲ್ಪಡಲಾರದೆಂದು ಘೋಷಿಸುತ್ತಿದೆ.”

“ಹಿಂದೂಸ್ಥಾನದ ಪ್ರಕೃತದ ರಾಜಕೀಯ ಪುರೋಗಾಮಿ ಧೋರಣವನ್ನು ಈ ಪರಿಷತ್ತು ಜಾಗರೂಕತೆಯಿಂದ ಪರಿಶೀಲಿಸಿ ಈ ಇಡೀ ಜಗತ್ತಿನ ಅದರಲ್ಲೂ ಭರತ ಖಂಡದ ರಾಜಕೀಯ ಅಲ್ಲೋಲಕಲ್ಲೋಲವಾಗಿರುವ ಈ ಸಂದರ್ಭದಲ್ಲಿ ಭರತ ಖಂಡದ ಸಂಸ್ಥಾನಗಳನ್ನು ಒಂದರಲ್ಲೊಂದು ಲೀನಮಾಡಿ ಚಿಕ್ಕ ಸಂಸ್ಥಾನಗಳನ್ನು ದೊಡ್ಡ ಸಂಸ್ಥಾನಗಳಿಗೆ ಸೇರಿಸುವ ಯೋಜನೆಯನ್ನು ಈ ಪರಿಷತ್ತು ವಿಷಾದಪೂರ್ವಕವಾಗಿ ಖಂಡಿಸುತ್ತದೆ.

ಈ ವ್ಯವಸ್ಥೆಯಿಂದ ಸಂಸ್ಥಾನದ ಜನಕ್ಕಾಗಲಿ ಪ್ರಭುತ್ವಗಳಿಗಾಗಲಿ ಯಾವ ಗಣನೀಯವಾದ ಲಾಭವೂ ಇಲ್ಲದೆ ಕೇವಲ ಅವುಗಳ ವ್ಯಕ್ತಿತ್ವ ಪ್ರತ್ಯೇಕತ್ವಗಳ ನಷ್ಟಮಾತ್ರ ಆಗುತ್ತದೆ. ಆದರೆ ಭವಿಷ್ಯದ್ಭಾರತದಲ್ಲಿ ಸಂಸ್ಥಾನಗಳ ಸ್ಥಾನಮಾನ ಹೊಸ ಬಗೆಯಿಂದ ರೂಪಗೊಳ್ಳಬಲ್ಲದೆಂದೂ ಈಗಿರುವ ಯಾವ ವ್ಯವಸ್ಥೆಯೂ ಈ ಪುನರ್ರಚನೆಗೆ ಬಾಧಕವಾಗಲಾರದೆಂದೂ ಈ ಯೋಜನೆಯ ಮೂಲ ವಿಚಾರವು ಒಂದು ಬಗೆಯಿಂದ ನಮಗೆ ಭರವಸೆ ಕೊಡುತ್ತಿರುವದನ್ನು ಗಮನಿಸುತ್ತದೆ. ಈ ದೃಷ್ಟಿಯಿಂದ ಭವಿಷ್ಯದ್ಭಾರತದಲ್ಲಿ ಸಂಸ್ಥಾನಗಳ ಪುನರ್ವ್ಯವಸ್ಥೆಯಾಗುವಂತಿದ್ದರೆ ತಮ್ಮ ಭಾಷೆಗನುಸರಿಸಿ ಆಯಾ ಭಾಷಾನುಗುಣ ಪ್ರಾಂತದಲ್ಲಿ ಲೀನವಾಗಬೇಕೆಂದು ಎರಡು ಮೂರು ನುಡಿಗಳ ಸಂಸ್ಥಾನವಿದ್ದರೆ ಅಲ್ಲಿ ಆಯಾ ಭಾಷೆಯ ಪ್ರಾಂತಕ್ಕೇ ಸೇರಿಸಬೇಕೆಂದೂ ಈ ಬಗ್ಗೆ ಹೌಸ್ ಆಫ್ ಲಾರ್ಡ್ಸ್‌ದಲ್ಲಿ ಬಂದ ಸೂಚನೆ ಸಮಂಜಸವಾಗಿದೆಯೆಂದೂ ಆ ಪ್ರಕಾರ ಈ ಸಂಸ್ಥಾನಗಳನ್ನು ನೆರೆಯಲ್ಲಿರುವ ಆ ಆ ಭಾಷೆಗಳ ಬ್ರಿಟಿಷ್ ಪ್ರಾಂತದಲ್ಲಿ ಲೀನ ಮಾಡಬೇಕೆಂದೂ ಈ ಪರಿಷತ್ತು ಅಭಿಪ್ರಾಯ ಪಡುತ್ತದೆ.”

“ಹಿಂದೂಸ್ಥಾನದ ಭಾವಿ ಘಟನೆಯನ್ನು ಸಿದ್ಧಪಡಿಸಬಹುದಾದ ಯಾವದೇ ಅಧಿಕೃತ ಮಂಡಳದ ಮುಂದೆ ಭಾಷಾನ್ವಯ ಪ್ರಾಂತರಚನೆಯ ತತ್ವವನ್ನೂ ಕರ್ನಾಟಕ ಪ್ರಾಂತೀಕರಣದ ಅಗತ್ಯವನ್ನೂ ಮಂಡಿಸಲು ಸಮ್ಮೇಳನಾಧ್ಯಕ್ಷರಿಗೆ ತಮ್ಮ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲು ಈ ಸಮ್ಮೇಳನ ಅಧಿಕಾರ ಕೊಡುತ್ತದೆ.”

ಈ ಮೇಲಿನ ನಿರ್ಣಯಗಳು ಸ್ವಯಂಸ್ಪಷ್ಟವಾಗಿವೆ. ಸಂಧಾನ ಸಮಿತಿಯೊಡನೆ ಭೇಟಿಯಾಗಲು ನಿರ್ದಿಷ್ಟ ಸ್ಥಳ ಕಾಲಗಳ ಸೂಚನೆಯು ಬಂದೊಡನೆ ಸಲಹೆಗಾರ ಮಂಡಲದ ಆಯ್ಕೆಯು ಮಾಡಲ್ಪಡುವುದು.

ಕರ್ಣಾಟಕಕ್ಕೆ ಪ್ರತ್ಯೇಕ ಭಾಷಾನುಗುಣ ಪ್ರಾಂತವು ಬೇಕೆಂಬ ನಮ್ಮ ಬೇಡಿಕೆಯ ಔಚಿತ್ಯದ ಕುರಿತು ಈ ಕೆಳಗಿನ ವಿವರವನ್ನು ಕೊಡುವುದು ಅಸಂಗತವಾಗದು. ಒಂದು ಪ್ರಾಂತದ ಆವಶ್ಯಕತೆಗಳು ಮುಖ್ಯವಾಗಿ ಇವು:

೧. ಭೌಗೋಲಿಕ ಸ್ಥಿತಿ;

೨. ಸುಸಂಸ್ಕೃತ ಭಾಷೆ;

೩. ಜನತೆಯ ಇಚ್ಛೆ;

೪. ಆರ್ಥಿಕ ಬಲ;

೫. ವಿಕಾಸಕ್ಕೆ ಅನುಕೂಲತೆ;

೬. ಆಡಳಿತೆಯ ಸೌಕರ್ಯ.

ಈ ಮೇಲಿನ ಶಿರೋನಾಮೆಗಳ ಕುರಿತು ಪ್ರತಿಯೊಂದಕ್ಕೆ ಸಂಕ್ಷಿಪ್ತ ವಿವರಣೆ ಕೊಡಲಾಗುವುದು.

### ೧. ಭೌಗೋಲಿಕ ಸ್ಥಿತಿ

ಕನ್ನಡವು ತಾಯಿನುಡಿಯಾಗಿರುವ, ಅಥವಾ ತಮ್ಮ ತಾಯಿನುಡಿಗಳಿಗೆ ಲಿಪಿಯಿಲ್ಲದ ಕಾರಣ ಕನ್ನಡವನ್ನೇ ಪ್ರಾದೇಶಿಕ ಭಾಷೆಯಾಗಿ ಅನಾದಿಯಿಂದಲೂ ಪರಿಗ್ರಹಿಸಿರುವ ಜನತೆಯುಳ್ಳ ಪ್ರದೇಶಗಳೆಲ್ಲ ಕರ್ಣಾಟಕ ಪ್ರಾಂತದಲ್ಲಿ ಸೇರುವುವು. ಏಕೀಕರಣ ಸಂಘಗಳು ಗೊತ್ತುಪಡಿಸಿರುವಂತೆ ಈ ಕೆಳಗಿನ ಪ್ರದೇಶಗಳು ಕರ್ಣಾಟಕ ಪ್ರಾಂತದಲ್ಲಿ ಸೇರಲಿವೆ:

**ಬ್ರಿಟಿಷ್ ಭಾರತದಲ್ಲಿ:**—೧. ಬೆಳಗಾಂವಿ ಜಿಲ್ಲೆ; ೨. ಧಾರವಾಡ ಜಿಲ್ಲೆ; ೩. ಬಿಜಾಪುರ ಜಿಲ್ಲೆ ೪. ಉತ್ತರ ಕನ್ನಡ ಜಿಲ್ಲೆ; ೫. ಶೋಲಾಪುರ ಜಿಲ್ಲೆಯ ಶೋಲಾಪುರ ತಾಲ್ಲೂಕು; ಬಾರ್ಶಿ ಸಂಗೋಲಿಯ ತಾಲ್ಲೂಕುಗಳು;

೬. ಮುಂಬಯಿ ಪ್ರಾಂತದ ಸತಾರಾ ಜಿಲ್ಲೆಯ ತಸ್ಗವಿ ಮತ್ತು ವಾಳವ ತಾಲ್ಲೂಕುಗಳ ಭಾಗಗಳು; ೭. ದಕ್ಷಿಣ ಕನ್ನಡ ಜಿಲ್ಲೆ; ೮. ಬಳ್ಳಾರಿ ಜಿಲ್ಲೆ; ೯. ನೀಲಗಿರಿ ಜಿಲ್ಲೆ; ೧೦. ಅನಂತಪುರ ಜಿಲ್ಲೆಯ ಮದಗಶಿರ, ಹಿಂದೂಪುರ ಮತ್ತು ಪೆನುಗೊಂಡ ತಾಲ್ಲೂಕುಗಳು; ೧೧. ಕರ್ನೂಲು ಜಿಲ್ಲೆಯ ಪಾತಿಕೊಂಡ; ೧೨. ಮಲಬಾರಿನ ವೈನಾಡು; ೧೩. ಕೊಯಮುತ್ತೂರು ಜಿಲ್ಲೆಯ ಕೊಯಮುತ್ತೂರು, ಅವನಾಶಿ, ಗೋಪಿಸೆಟ್ಟಿಪಾಳಯಂ, ಭವಾನಿ ಮತ್ತು ಕೊಳ್ಳೆಗಾಲ ತಾಲ್ಲೂಕುಗಳು; ೧೪ ಸೇಲಂ ಜಿಲ್ಲೆಯ




ಹೊಸೂರು, ಕೃಷ್ಣಗಿರಿ ಮತ್ತು ಧರ್ಮಪುರಿ ತಾಲ್ಲೂಕುಗಳು; ೧೫. ಚಿತ್ತೂರು ಜಿಲ್ಲೆಯ ಪುಂಗನೂರು ಪ್ರದೇಶ; ೧೬. ಮದರಾಸು ಪ್ರಾಂತದ ಉತ್ತರ ಆರ್ಕಾಡು ಜಿಲ್ಲೆಯ ಕರಿಗುಂದಿ; ೧೭. ಪೂರ್ಣ ಕೊಡಗು ಪ್ರಾಂತ.

**ದೇಶೀಯ ಸಂಸ್ಥಾನಗಳಲ್ಲಿ:**—೧. ಇಡೀ ಮೈಸೂರು ಸಂಸ್ಥಾನ; ೨. ಹೈದರಾಬಾದಿನ ಬಿದರೆ, ಕಲುಬುರ್ಗಿ, ರಾಯಚೂರು, ಮತ್ತು ಕೊಪ್ಪಲದ ಭಾಗಗಳು; ೩. ಕೊಲ್ಲಾಪುರ; ೪. ಹಿರಿಯ ಮತ್ತು ಕಿರಿಯ ಮಿರಜಿ; ೫. ಜಮಖಂಡಿ; ೬. ರಾಮದುರ್ಗ; ೭. ಮುಧೋಳ; ೮. ಅಕಲಕೋಟೆ; ೯. ಹಿರಿಯ ಮತ್ತು ಕಿರಿಯ ಕುರುಂದವಾಡಿ; ಔಂಧ್; ೧೦. ಸವಣೂರು; ೧೨. ಸೊಂಡೂರು; ೧೩. ಸಾಂಗ್ಲಿ—ಈ ಚಿಕ್ಕ ಸಂಸ್ಥಾನಗಳು.

ಈ ಇಡೀ ಪ್ರದೇಶವು ಅಭಿನ್ನ ಪ್ರದೇಶವಾಗಿದ್ದು, ದಕ್ಷಿಣೋತ್ತರ ೪೨೫ ಮೈಲು, ಪೂರ್ವಪಶ್ಚಿಮ ೩೨೫ ಮೈಲು ಅಗಲತೆಯದಾಗಿ, ಸುಮಾರು ೧ ಲಕ್ಷ ಚದರ ಮೈಲು ವಿಸ್ತೀರ್ಣವಿದ್ದು, ಅದರ ಜನಸಂಖ್ಯೆಯು ೧॥ ಕೋಟಿಯಷ್ಟಿದೆ. ಪಶ್ಚಿಮಗಡಿಯಾಗಿ ಸುಮಾರು ೨೦೦ ಮೈಲು ಉದ್ದ ಸಮುದ್ರ ತೀರವಿದೆ.

ದೇಶೀಯ ಸಂಸ್ಥಾನಗಳನ್ನು ಬಿಟ್ಟರೂ, ಕೇವಲ ಬ್ರಿಟಿಷ್ ಕರ್ಣಾಟಕವೇ ೪೭,೭೭೮ ಚದರ ಮೈಲು ವಿಸ್ತೀರ್ಣವಿದ್ದು, ೮೨,೫೮,೨೪೦ ಜನಸಂಖ್ಯೆಯುಳ್ಳದ್ದಾಗಿದೆ. ಕೆಳಗಿನ ತಖ್ತೆಯಲ್ಲಿ ಕರ್ಣಾಟಕದ ಬಲ ವಿಸ್ತೀರ್ಣಗಳು ಹೋಲಿಸಲಾಗಿವೆ:

| ಪ್ರಾಂತ | ವಿಸ್ತೀರ್ಣ ಚದರ ಮೈಲು | ಜನಸಂಖ್ಯೆ | ಜಿಲ್ಲೆಗಳು |
|---|---|---|---|
| ಕರ್ಣಾಟಕ | ೪೭,೭೭೮ | ೮೨,೫೮,೨೪೦ | ಇಡೀ ೮ ಜಿಲ್ಲೆಗಳೂ ೨ ಜಿಲ್ಲೆಗಳಾಗುವಷ್ಟು ತುಂಡುಗಳೂ ಇವೆ |
| ಸಿಂಧ | ೪೬,೩೭೮ | ೩೮,೮೭,೦೭೦ | ೭ |
| ಆಸ್ಸಾಂ | ೫೫,೦೧೪ | ೮೬,೨೨,೨೫೧ | ೧೨ |
| ಒರಿಸ್ಸಾ | ೧೩,೭೦೦ | ೫೩,೦೬,೧೪೨ | ೫ |
| ವಾಯುವ್ಯ ಪ್ರಾಂತ | ೧೩,೫೧೮ | ೨೪,೨೫೦,೭೬ | ೫ |

ಹೀಗೆ ಸಿಂಧ, ಒರಿಸ್ಸಾ, ವಾಯುವ್ಯ ಪ್ರಾಂತಗಳಿಗಿಂತ ಕರ್ಣಾಟಕದ ವಿಸ್ತೀರ್ಣವು ಹೆಚ್ಚಾಗಿದೆ. ಈ ಪ್ರಾಂತಗಳ ಜನಸಂಖ್ಯೆಗಿಂತ ಬ್ರಿಟಿಷ್ ಕರ್ಣಾಟಕದ ಜನ ಸಂಖ್ಯೆಯೇ ಹೆಚ್ಚಾಗಿದೆ. ಕರ್ಣಾಟಕದ ವಿಸ್ತೀರ್ಣ ಜನಸಂಖ್ಯೆಗಳು ಆಸ್ಸಾಂ ಪ್ರಾಂತಕ್ಕೆ ಸಮಾನವಾಗಿವೆ. ಇವುಗಳಲ್ಲಿ ವ್ಯತ್ಯಾಸವೆಂದರೆ ಕರ್ಣಾಟಕದಲ್ಲಿ ಜನವಸತಿಯಿರುವ ಭಾಗವು ಅಸ್ಸಾಮಿಗಿಂತ ವಾಸ್ತವಿಕವಾಗಿಯೂ

ಹೆಚ್ಚಾಗಿದೆ. ಅಲ್ಲಿರುವಂತೆ ಗುಡ್ಡ ಪ್ರದೇಶಗಳು ಇಲ್ಲಿಲ್ಲ. ಅಸ್ಸಾಮಿನಲ್ಲಿ ಚಹಾ ತೋಟಗಳ ಕೂಲಿಯವರೇ ಜನತೆಯ ಹೆಚ್ಚಿನ ಅಂಶವಾಗಿರುವರು. ಕೆಲವು ಗುಡ್ಡ ಪ್ರದೇಶಗಳು ಮೈಸೂರು ಸಂಸ್ಥಾನದ ಸುತ್ತಲೂ ಇವೆ. ಆದರೆ ಅವುಗಳ ನಡುವೆ ವ್ಯವಹಾರ ಸೌಕರ್ಯಕ್ಕೆ ಕಷ್ಟ ವಿಲ್ಲ. ಅವೆಲ್ಲ ರಸ್ತೆಯ ಸಂಪರ್ಕದಿಂದ ಜೋಡಿಸಲ್ಪಟ್ಟಿವೆ. ಮೈಸೂರು ಸಂಸ್ಥಾನವು ಶುದ್ಧ ಕರ್ಣಾಟಕ ಪ್ರದೇಶವಾಗಿರುವುದರಿಂದ ಅದು ಆಡಳಿತೆಯ ಯಾ ಇತರ ತೊಂದರೆಗಳನ್ನುಂಟುಮಾಡುವುದಿಲ್ಲ. ಇತರ ಎಲ್ಲಾ ಸಂಸ್ಥಾನಗಳೂ ಬ್ರಿಟಿಷ್ ಕರ್ಣಾಟಕದೊಳಗೇ ಅಥವಾ ಅದರ ಗಡಿಯಲ್ಲಿರುವುವು. ಹೀಗೆ ಈ ಬ್ರಿಟಿಷ್ ಕರ್ಣಾಟಕವೇ ಪ್ರತ್ಯೇಕ ಪ್ರಾಂತೀಯ ಆಡಳತೆಗೆ ಅನುಕೂಲತೆಯನ್ನು ಕಲ್ಪಿಸಿಕೊಡುತ್ತದೆ.

### ೨. ಸುಸಂಸ್ಕೃತ ಭಾಷೆ

ಪುರಾತನವೈಭವವಿಲ್ಲದ ಯಾವ ಜನಾಂಗವೂ ಭವಿಷ್ಯದ ವೈಭವವನ್ನು ಆಶಿಸಲು ಸಮರ್ಥವಾಗಲಾರದು. ಕರ್ಣಾಟಕದ ರಾಜಕೀಯ ಮತ್ತು ಸಂಸ್ಕೃತಿಯ ಇತಿಹಾಸವು ಕನ್ನಡಿಗರ ಉನ್ನತಿಗೆ ಸ್ಫೂರ್ತಿ ಕೊಡುತ್ತದೆ. ಅದು ದೇಶದ ಸಾರ್ವತ್ರಿಕ ಬೆಳವಣಿಗೆಗೆ ಮತ್ತು ಐಕ್ಯಕ್ಕೆ ಬಲವೀಯುವ ಅಂಶವಾಗಲೇಬೇಕು. ೩ನೆಯ ಶತಮಾನದಲ್ಲಿ ಕದಂಬರೂ, ೬ನೆಯ ಶತಾಬ್ದಿಯಲ್ಲಿ ಚಾಲುಕ್ಯರೂ, ೮ನೆಯ ಶತಮಾನದಲ್ಲಿ ರಾಷ್ಟ್ರಕೂಟರೂ, ೯ ರಿಂದ ೧೧ರ ವರೆಗೆ ಎರಡನೆಯ ಚಾಲುಕ್ಯರೂ, ೧೨ ರಿಂದ ೧೪ ರ ವರೆಗೆ ಹೊಯ್ಸಳರೂ, ೧೪ ರಿಂದ ೧೬ ರ ವರೆಗೆ ವಿಜಯನಗರದ ಅರಸರೂ, ೧೬ನೆಯ ಶತಮಾನದಿಂದ ಈಚೆಗೆ ಒಡೆಯರೂ, ಬ್ರಿಟಿಷ್ ರಾಜ್ಯಭಾರದ ಆರಂಭದವರೆಗೂ ಅವಿರತವಾದ ಸಾಂಸ್ಕೃತಿಕ ವಿಕಾಸದೊಡನೆ ಕರ್ಣಾಟಕದ ಪ್ರದೇಶಗಳನ್ನು ಆಳಿದರು. ಸಮಂತಭದ್ರ, ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯ, ಬಸವೇಶ್ವರರಂತಹ ಧಾರ್ಮಿಕ ಗುರುಗಳು ಕರ್ಣಾಟಕವನ್ನು ತಮ್ಮ ನೆಲೆನಾಡಾಗಿ ಮಾಡಿಕೊಂಡಿದ್ದರು. ಅವರ ಉಪದೇಶಗಳು ಅಲ್ಲಿಂದ ದೇಶವೆಲ್ಲ ವ್ಯಾಪಿಸಿವೆ. ೧೬೦೦ ಕ್ಕಿಂತಲೂ ಮಿಗಿಲಾಗಿ ಕನ್ನಡ ಕವಿಗಳು ಕನ್ನಡ ಸಾಹಿತ್ಯವನ್ನು ಬೆಳಸಿದರು. ಆದರೆ ಅವರಲ್ಲಿ ಹಲವರ ಕೃತಿಗಳು ಇನ್ನೂ ಪ್ರಕಟವಾಗಿರುವುದಿಲ್ಲ. ಅಜಂತ, ಹಂಪೆ, ಬೇಲೂರು, ಹಳೆಬೀಡು, ಶ್ರವಣಬೆಳಗುಳ, ಶೃಂಗೇರಿ, ವೇಣೂರು, ಕಾರ್ಕಳ, ಮೂಡಬಿದರೆ, ಮತ್ತು ಇನ್ನಿತರ ಹಲವು ಸ್ಥಳಗಳಲ್ಲಿ ಯಾವ ಜನಾಂಗವೂ ಹೆಮ್ಮೆಪಡತಕ್ಕಂತಹ ಅಪೂರ್ವ ಶಿಲ್ಪಕೃತಿಗಳು ಇವೆ. ಕರ್ಣಾಟಕ ಸಂಗೀತವು ಸ್ವಯಂ ಶಾಸ್ತ್ರೀಯವೆಂದೆಣಿಸಲ್ಪಟ್ಟಿದೆ. ಕಂದ, ವೃತ್ತ, ಲಾವಣಿ, ಯಕ್ಷಗಾನಗಳು ಆದರ ವೈಶಿಷ್ಟ್ಯಗಳು. ಕನ್ನಡವು ಕ್ರಿಸ್ತಪೂರ್ವ ೩ನೆಯ ಶತಮಾನಕ್ಕಿಂತಲೂ ಪುರಾತನ ಭಾಷೆಯಾಗಿದೆ. ಅದು ಸಮೃದ್ಧವಾದ ಭಾಷೆ. ದೇಶದ ಸುಸಂಸ್ಕೃತ ಭಾಷೆಗಳಲ್ಲಿ ಅದಕ್ಕೆ ೫ನೆಯ ಸ್ಥಾನವಿದೆ. ದೇಶದಲ್ಲಿ ಬೇರೆ ಬೇರೆ ಭಾಷೆಗಳನ್ನಾಡುವ ಜನರಿರುವ ದೃಷ್ಟಿಯಿಂದ ಕನ್ನಡಕ್ಕೆ ೭ನೆಯ ಸ್ಥಾನವಿದೆ.

### ೩. ಜನತೆಯ ಇಚ್ಛೆ

ಪ್ರತ್ಯೇಕ ಕರ್ಣಾಟಕ ಪ್ರಾಂತವಾಗಬೇಕೆಂಬ ವಿಷಯದಲ್ಲಿ ಕನ್ನಡಿಗರೊಳಗೆ ಮತಭೇದವಿಲ್ಲ. ೧೮೯೦ ರಲ್ಲಿ ಧಾರವಾಡದಲ್ಲಿ "ಕರ್ನಾಟಕ ವಿದ್ಯಾವರ್ಧಕ ಸಂಘವು" ಸ್ಥಾಪನೆಯಾದಂದಿನಿಂದ ಈ ಸ್ವವ್ಯವಸ್ಥೆಯ ಚಳವಳಿಯು ಬೆಳೆಯುತ್ತ ಬಂದು, ಮೇಲೆ ಹೇಳಿದ ಕರ್ಣಾಟಕ ಏಕೀಕರಣ ಸಭೆಯು ಮಂಜೂರುಮಾಡಿದ ನಿರ್ಣಯಗಳ ಅಭಿಪ್ರಾಯದಿಂದ ತಿಳಿಯುವಂತೆ, ಜನರು ಅದಕ್ಕಾಗಿ ಪಣತೊಟ್ಟಿದ್ದಾರೆ. ೧೯೧೭ ರಲ್ಲಿ ಕರ್ಣಾಟಕ ಪ್ರಾಂತ ರಚನೆಗಾಗಿ ಇಂಡಿಯ ಸೆಕ್ರೆಟರಿಗಳಿಗೆ ಮನವಿಯನ್ನು ಕಳುಹಲಾಗಿತ್ತು. ೧೯೨೦ ರಲ್ಲಿ ನಾಗಪುರದಲ್ಲಿ ಜರಗಿದ ನ್ಯಾಷನಲ್ ಕಾಂಗ್ರೆಸ್ಸೂ ಈ ಬೇಡಿಕೆಯನ್ನು ಮನ್ನಿಸಿರುತ್ತದೆ. ೧೯೨೧ ರಲ್ಲಿ ಇತರ ಪ್ರಾಂತಗಳಂತೆ 'ಕರ್ಣಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯು ಸ್ವತಂತ್ರವಾಗಿ ಅಸ್ತಿತ್ವಕ್ಕೆ ಬಂದು ಈಗಲೂ ನಡೆಯುತ್ತಿದೆ. ಮೇಲೆ ಹೇಳಿದ ಎಲ್ಲಾ ಕನ್ನಡ ಪ್ರದೇಶಗಳ ಮೇಲೆ ಈ ಕಮಿಟಿಗೆ ಅಧಿಕಾರವಿದೆ. ಈ ಭಾಷಾನುಗುಣ ವ್ಯವಸ್ಥೆಯು ಕರ್ಣಾಟಕದಲ್ಲಿ ಹಲವು ಸಂಸ್ಥೆಗಳಿಗೆ ಪ್ರೋತ್ಸಾಹವಿತ್ತಿತು: ಕರ್ಣಾಟಕ ಏಕೀಕರಣ ಸಂಘ, ಕರ್ಣಾಟಕ ಮಹಿಳಾಪರಿಷತ್ತು, ಕರ್ಣಾಟಕ ವೃತ್ತ ಪತ್ರಿಕೆ ಸಂಪಾದಕರ ಸಂಘ, ಕರ್ಣಾಟಕ ವ್ಯಾಯಾಮ ಪರಿಷತ್ತು, ಕರ್ಣಾಟಕ ಸೇವಾದಳ, ಕರ್ಣಾಟಕ ನಾಟಕ ಮಂಡಲಿ, ಕರ್ಣಾಟಕ ಮಿತ್ರಮಂಡಳಿ, ಕರ್ಣಾಟಕ ವರ್ತಕರ

ಸಂಘ, ಕರ್ಣಾಟಕ ದಿಗಂಬರ ಜೈನ ಸಂಘ, ಕರ್ಣಾಟಕ ಆಯುರ್ವೇದ ಪರಿಷತ್, ಮುಂತಾದ ಹಲವಾರು ಸಂಸ್ಥೆಗಳು ತಲೆಯೆತ್ತಿದುವು. ಕರ್ಣಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಗಿಂತಲೂ ಕನ್ನಡ ಸಾಹಿತ್ಯ ಪರಿಷತ್ತು ಹಳೆಯ ಸಂಸ್ಥೆಯಾಗಿದ್ದು ಈಗ್ಗೆ ೩೦ ವರ್ಷಗಳಿಂದಲೂ ಯೋಗ್ಯರೀತಿಯಲ್ಲಿ ನಡೆಯುತ್ತಿದೆ. ಇವಲ್ಲದೆ ಹಲವಾರು ಶಿಕ್ಷಣ ಸಂಘಗಳೂ ಶಿಕ್ಷಣ ಮತ್ತು ಸಂಸ್ಕೃತಿಯ ಚಟುವಟಿಕೆಗಳನ್ನು ಜರಗಿಸುತ್ತಿವೆ: ಲಿಂಗಾಯತ ಶಿಕ್ಷಣ ಸಂಘ, ರಾಷ್ಟ್ರೀಯ ವಾಙ್ಮಯ ಟ್ರಸ್ಟ್, ಕರ್ಣಾಟಕ ಶಿಕ್ಷಣ ಬೋರ್ಡು ಇತ್ಯಾದಿ. ವರ್ತಕ ಇಲಾಖೆಯಲ್ಲಿಯೂ ಕನ್ನಡಿಗರು ಹಿಂದುಳಿದಿಲ್ಲ. ಬ್ಯಾಂಕಿಂಗ್ ಮತ್ತು ಇನ್ಷ್ಯೂರೆನ್ಸ್ ಕಂಪೆನಿಗಳಿಗೆ ಕರ್ಣಾಟಕವು ಪ್ರಸಿದ್ಧವಾಗಿದೆ.

೧೯೨೧ ರಿಂದ ಭಾಷಾನುಗುಣ ಸಂಘಟನೆಗೆ ಪ್ರೋತ್ಸಾಹ ಸಿಕ್ಕಿದ ಕಾರಣ ಉಮೇದುವಾರರ ಚುನಾವಣೆಯಲ್ಲಿ ಕರ್ಣಾಟಕ ಕಾಂಗ್ರೆಸ್ ಕಮಿಟಗೆ ಅಪೂರ್ವ ಜಯ ದೊರೆಯಿತು. ಅನೇಕ ವ್ಯಾಪಾರಿ ಸಂಸ್ಥೆಗಳೂ ಇಂದು ತಮ್ಮ ಶಾಖೆಗಳನ್ನು ಭಾಷಾ ದೃಷ್ಟಿಯಿಂದಲೇ ಅಲ್ಲಲ್ಲಿ ಹಬ್ಬಿಸಿವೆ.

ಗವರ್ನರರೂ, ಮಂತ್ರಿಗಳೂ ಕರ್ಣಾಟಕದಲ್ಲಿ ಆಗಾಗ ಸಂಚರಿಸುತ್ತಿರುವ ಸಮಯ ಕರ್ಣಾಟಕ ಪ್ರಾಂತರಚನೆಗಾಗಿ ಅನೇಕ ಅರ್ಜಿಗಳೂ, ಮನವಿಗಳೂ ಒಪ್ಪಿಸಲ್ಪಟ್ಟಿವೆ. ಈ ಹಿಂದೆ ಜನತೆಯ ಸಾಮೂಹಿಕ ಅರ್ಜಿಯು ಸರಕಾರಕ್ಕೆ ಕಳುಹಲ್ಪಟ್ಟದೆ. ನೆಹರು ಕಮಿಟಿಯು ಕರ್ಣಾಟಕ ಪ್ರಾಂತದ ರಚನೆಯನ್ನು ಶಿಫಾರಸು ಮಾಡಿತು. ಲಖನೋದಲ್ಲಿ ಜರಗಿದ ಸರ್ವಪಕ್ಷಗಳ ಪರಿಷತ್ತು ನೆಹರು ಕಮಿಟಿಯ ವರದಿಯನ್ನು ಪರಿಶೀಲಿಸಿ, ಕರ್ಣಾಟಕ ಪ್ರಾಂತ ರಚನೆಯನ್ನು ಪುಷ್ಟೀಕರಿಸಿತು. ಸೈಮನ್ ಕಮಿಷನನ್ನು ಎಲ್ಲರಿಗೂ ಗೊತ್ತಿರುವ ಕಾರಣಕ್ಕಾಗಿ ಕನ್ನಡಿಗರೂ ಬಹಿಷ್ಕರಿಸಿದುದರಿಂದ ಅದು ಈ ಕುರಿತು ಸ್ಪಷ್ಟವಾದ ಉಲ್ಲೇಖ ಮಾಡವೆ, ೧೯೩೫ನೆಯ ಇಂಡಿಯ ಸರಕಾರ ಆಕ್ಟಿನ ೨೯೦ (೧)ನೆಯ ಸೆಕ್ಷನಿನಲ್ಲಿ ಭಾಷಾನುಗುಣ ಪ್ರಾಂತಗಳ ರಚನೆಗೆ ಶಿಫಾರಸು ಮಾಡಿದೆ. ಅಂತೆಯೇ ೧೯೩೮ರಲ್ಲಿ ಕರ್ಣಾಟಕ ಪ್ರದೇಶಗಳಿಗೆ ಸಂಬಂಧಪಟ್ಟ ಮದರಾಸು ಮತ್ತು ಬೊಂಬಾಯಿ ಶಾಸನ ಸಭೆಗಳು ಆ ಶಿಫಾರಸನ್ನು ಸರ್ವಾನುಮತದಿಂದ ಮಂಜೂರುಮಾಡಿ, ಇತರ ಭಾಷಾನುಗುಣ ಪ್ರಾಂತಗಳಂತೆ ಪ್ರತ್ಯೇಕ ಕರ್ಣಾಟಕ ಪ್ರಾಂತದ ಶೀಘ್ರರಚನೆಯ ಕಾರ್ಯವನ್ನು ಕೈಗೊಳ್ಳುವಂತೆ ಇಂಡಿಯ ಸೆಕ್ರೆಟರಿಗಳಿಗೆ ಶಿಫಾರಸು ಕಳುಹಿದುವು. ಅದಕ್ಕೂ ಹಿಂದೆ ಕೊಡಗಿನ ಹಾಗೂ ಮದರಾಸಿನ ಶಾಸನ ಸಭೆಗಳು ಕರ್ಣಾಟಕವನ್ನು ಪ್ರತ್ಯೇಕಿಸಿ ಪ್ರಾಂತರಚನೆಗೆ ಪುಷ್ಟಿಕೊಟ್ಟವೆ. ವಿಶ್ವ ಮಹಾಯುದ್ಧದ ಕಾರಣ ೧೯೩೯ರಿಂದ ರಾಜ್ಯಘಟನೆಯ ಬದಲಾವಣೆಗಳ ಚಳವಳಿಯು ಹಿಂದೆ ಬಿದ್ದರೂ, ಈಗ್ಗೆ ಕೆಲವು ಸಮಯದಿಂದ ಭಾರತದ ಬಿಕ್ಕಟ್ಟನ್ನು ಬಗೆಹರಿಸುವ ಪ್ರಯತ್ನದಿಂದಾಗಿ ಈ ಚಳವಳಿಗೆ ಹೊಸ ಹುರುಪು ದೊರೆಯಿತು. ಕನ್ನಡಿಗರ ಬೇಡಿಕೆಯು ಅಪ್ರತಿಹತ ಮತ್ತು ಅನಿವಾರ್ಯವಾಗಿದೆ. ಅವರ ಹೊಲಗಳು ಬಿಸಿಲಲ್ಲಿ ಕಾದಿವೆ; ಅವರ ವ್ಯಾಪಾರ ಮತ್ತು ಮಾರ್ಗಸೌಕರ್ಯಗಳು ಅಲಕ್ಷಿಸಲ್ಪಟ್ಟಿವೆ; ಬಂದರಗಳು ವಿಕಾಸವಿಲ್ಲದೆ ಹಾಳು ಬಿದ್ದಿವೆ; ಅವರ ಸಂಸ್ಕೃತಿಗೂ ಭಾಷೆಗೂ ಮನ್ನಣೆ ದೊರೆತಿಲ್ಲ; ಅವರ ಶಿಕ್ಷಣದ ಬೆಳವಣಿಗೆಯನ್ನು ಹೆಚ್ಚುಗದ್ದಲ ಮಾಡುತ್ತಿರುವ ನೆರೆಕರೆಯ ಪ್ರಾಂತಗಳ ಹಿತಕ್ಕಾಗಿ ಬಲಿಕೊಡಲಾಗಿದೆ. ಪತ್ರಿಕೆಗಳು, ಜನರು, ವ್ಯಾಪಾರಿಗಳು, ವಿದ್ಯಾರ್ಥಿಗಳು, ಶಿಕ್ಷಣಸಂಸ್ಥೆಗಳು, ಸ್ಥಳೀಯ ಬೋರ್ಡು ಮತ್ತು ಮುನಿಸಿಪಾಲಿಟಿಗಳು ಹಾಗೂ ಜನರ ಮುಂದಾಳುಗಳೆಲ್ಲರೂ ಕರ್ಣಾಟಕ ಪ್ರಾಂತರಚನೆಗೆ ಏಕಾಭಿಪ್ರಾಯವುಳ್ಳವರಾಗಿದ್ದಾರೆ. ಸ್ವವ್ಯವಸ್ಥೆಯ ಅವರ ಹಕ್ಕನ್ನು ಮನ್ನಿಸದಿದ್ದರೆ, ಅವರು ಉದ್ವಿಗ್ನರಾಗುವುದು ನಿಶ್ಚಯ. ಅವರು ಇದಕ್ಕಾಗಿ ಕಾದಿದ್ದಾರೆ. ಮುಂದಿನ ರಾಜ್ಯಘಟನೆಯ ಮಾರ್ಪಾಟಿನಲ್ಲಿ ಪ್ರಾಂತರಚನೆಯ ಈ ಹಕ್ಕನ್ನು ಮನ್ನಿಸದಿದ್ದಲ್ಲಿ, ಅಂತಹ ಭವಿಷ್ಯದ ರಾಜ್ಯಘಟನೆಯನ್ನಾಗಲಿ, ಈಗಿನ ಗಡಿಗಳು ಹೀಗೆಯೇ ಇರುವುದನ್ನಾಗಲಿ ಸಹಿಸಲಾರರು.

### ೪. ಆರ್ಥಿಕ ಸ್ಥಿರತೆ

ನೆಹರು ಕಮಿಟಿಯು ಪ್ರತ್ಯೇಕ ಆಡಳಿತೆ ಪ್ರಾಂತಗಳ ಆರ್ಥಿಕ ವಿಚಾರಗಳನ್ನು ಪರಿಶೀಲಿಸಿ, ಕರ್ಣಾಟಕ ಪ್ರಾಂತವು ಸ್ವಾವಲಂಬಿಯಾಗಿದೆಯೆಂದು ನಿರ್ಣಯಿಸಿತು. ಬೆಳಗಾಂವಿ, ಧಾರವಾಡ, ಬಿಜಾಪುರ, ದಕ್ಷಿಣ ಕನ್ನಡ, ಬಳ್ಳಾರಿ, ನೀಲಗಿರಿ ಮತ್ತು ಕೊಡಗು ಈ ೮ ಜಿಲ್ಲೆಗಳ

ವರ್ಷದ ಕಂದಾಯದಿಂದ ಉತ್ಪನ್ನ ರೂ. ೨,೫೭,೯೧,೩೮೩ ಮತ್ತು ಖರ್ಚು ರೂ. ೨,೦೯,೭೦,೩೬೭ ರೂ. ಆಗಿರುತ್ತ ೪೮,೨೧,೧೦೬ ರೂ. ಅಷ್ಟು ಉಳಿತಾಯವಿದೆ. ಇಂದು ಈ ಪರಿಸ್ಥಿತಿಯು ಇದಕ್ಕಿಂತ ಕೆಟ್ಟಿರುವುದಿಲ್ಲ; ಮಾತ್ರವಲ್ಲದೆ ಸೇಲ್ಸ್‌ಟ್ಯಾಕ್ಸ್, ಮೋಟರ ಟ್ಯಾಕ್ಸ್, ತಂಬಾಕು ಚಾ ಕಾಫಿಗಳ ಟ್ಯಾಕ್ಸ್ ಮುಂತಾದ ತೆರಗಳು ಹೊರಿಸಲ್ಪಟ್ಟು ಈ ಉತ್ಪನ್ನವು ಇನ್ನೂ ಹೆಚ್ಚಾಗಿದೆ. ಆದರೆ ಖರ್ಚು ವಿಶೇಷವಾಗಿ ಬೆಳೆದಿಲ್ಲ. ಮದರಾಸು ಸರಕಾರವಾಗಲಿ, ಬೊಂಬೈ ಸರಕಾರವಾಗಲಿ, ಸಾರ್ವಜನಿಕ ಸಾಲವನ್ನೆತ್ತಿ ಈ ಪ್ರಾಂತದಲ್ಲಿ ಮೂಲಭೂತ ಅಭಿವೃದ್ಧಿಯ ಕೆಲಸಗಳಿಗಾಗಿ ಏನೂ ಖರ್ಚುಮಾಡಿರುವುದಿಲ್ಲ. ಆದಕಾರಣ ಆ ಸಾರ್ವಜನಿಕ ಸಾಲಗಳಲ್ಲಿ ಕರ್ನಾಟಕ ಪ್ರಾಂತಕ್ಕೆ ಯಾವ ಪಾಲೂ ಇಲ್ಲ; ಮಾತ್ರವಲ್ಲದೆ ಈ ಪ್ರಾಂತದಿಂದ ಇಷ್ಟು ಅವಧಿಯ ವರ್ಷಗಳ ಉಳಿತಾಯವನ್ನು ಪಡೆದು, ಮದರಾಸ ಬೊಂಬಾಯಿ ಸರಕಾರಗಳು ಇತರ ಜಿಲ್ಲೆಗಳಲ್ಲಿ ಖರ್ಚುಮಾಡಿದ ಭಂಡವಲದ ಆ ಅಂಶವನ್ನು ಅವರು ಹಿಂದಿರುಗಿ ಕೊಡಬೇಕೆಂಬುದೇ ಕನ್ನಡಿಗರ ಬೇಡಿಕೆಯಾಗಿದೆ. ವರ್ಷದ ಉಳಿತಾಯವು ಪ್ರಾಂತದ ವಿಶ್ವವಿದ್ಯಾಲಯ, ಹೈಕೋರ್ಟು, ಸೆಕ್ರೆಟೇರಿಯಟ್ ಮತ್ತು ಶಾಸನ ಸಭೆಗಳನ್ನು ನಡೆಯಿಸಲು ಸಾಕಾಗುವುದು.

### ೫. ವಿಕಾಸಕ್ಕೆ ಅವಕಾಶ

ಕರ್ನಾಟಕದಷ್ಟು ವಿಕಾಸಕ್ಕೆ ಅವಕಾಶವುಳ್ಳ ಪ್ರಾಂತವು ಈ ದೇಶದಲ್ಲಿ ಬೇರೆ ಯಾವುದಾದರೂ ಇದೆಯೆಂದು ನಾವು ತಿಳಿಯುವುದಿಲ್ಲ. ಗೆರ್ಸೊಪ್ಪೆ (೮೦೦ ಅಡಿ), ಉಂಚಲ (೩೦೦ ಅಡಿ), ಲಾಲಗಲಿ (೩೦೦ ಅಡಿ), ಪಗೋಡ (೩೦೦ ಅಡಿ), ಗೋಕಾಕ (೧೫೦ ಅಡಿ) ಇವುಗಳಲ್ಲಿರುವ ಜೋಗುಗಳಿಂದ ಜಲಜನಿತ ವಿದ್ಯುಚ್ಛಕ್ತಿಯ ಉತ್ಪತ್ತಿಯ ಮೂಲಕ ವಿಶೇಷ ಅಭಿವೃದ್ಧಿಗೆ ಅವಕಾಶವಿದೆ. ಕರ್ನಾಟಕದಲ್ಲಿರುವ ಜಲಜನಿತ ವಿದ್ಯುಚ್ಛಕ್ತಿಯು ಇಂದು ಕರ್ನಾಟಕದ ಪ್ರದೇಶಗಳಿಗೆ ಶಕ್ತಿಯನ್ನು ಕೊಡುತ್ತಿಲ್ಲ. ಭೀಮಾನದಿ, ಕಾವೇರೀ ನದಿ, ತುಂಗಭದ್ರಾನದಿ ಮತ್ತು ಇನ್ನಿತರ ನದಿಗಳಿಂದ ನೀರಾವರಿ ಕೆಲಸದ ಬೆಳವಣಿಗೆಗೆ ಬಹಳ ಅವಕಾಶವಿದ್ದರೂ ಅದು ಇಂದು ಕಾಣಬರುವುದಿಲ್ಲ. ಬಳ್ಳಾರಿ, ವಿಜಾಪುರ ಮತ್ತು ಧಾರವಾಡದ ಕೆಲವು ಭಾಗಗಳಲ್ಲಿ ಆಹಾರ ಜಿನಸುಗಳ ಕೊರತೆಯು ಇನ್ನೂ ಬಹಳವಾಗಿದೆ.

ಭಟಕಳ, ಹೊನ್ನಾವರ, ಕಾರವಾರ, ಮಂಗಳೂರು ಮತ್ತು ಮಲ್ಪೆ–ಇವು ಪ್ರಕೃತಿದತ್ತ ಬಂದರಗಳು. ಬ್ರಿಟಿಷರ ಆಗಮನಕ್ಕೆ ಮೊದಲೇ ಇವು ಸಮೃದ್ಧವಾಗಿದ್ದುವು. ಕೆಲವು ಬಂದರುಗಳಿಂದ ಆಫ್ರಿಕಾ ಅರೇಬಿಯಾಗಳೊಡನೆಯೂ ವ್ಯಾಪಾರವು ಸಾಗುತ್ತಿದ್ದಿತು.

ಎರಡು ಕನ್ನಡ ಜಿಲ್ಲೆಗಳ ಗಡಿಯಲ್ಲಿರುವ ಪಶ್ಚಿಮ ಘಟ್ಟಗಳು ಅಲಕ್ಷಿಸಲ್ಪಟ್ಟಿವೆ. ಆದರೆ ಅವುಗಳು ಮರ, ಗಂಧ, ಸಾಗುವಾನಿ, ಏಲಕ್ಕಿ, ಔಷಧ ಗಿಡಮೂಲಿಕೆಗಳು, ಪುಷ್ಪ, ಆನೆ ಮುಂತಾದವಕ್ಕೆ ಆಗರವಾಗಿವೆ. ಕೃಷಿ ವಿಚಾರದಲ್ಲಿ ಇಲ್ಲಿಯ ಉತ್ಪತ್ತಿಯು ಅಕ್ಕಿ, ಗೋಧಿ, ಜೋಳ, ಕಬ್ಬು, ನೆಲಗಡಲೆ, ತೆಂಗಿನಕಾಯಿ, ಅಡಕೆ, ರಾಗಿ; ಅಲ್ಲದೆ ಚಹಾ, ಕಾಫಿ, ತಂಬಾಕು, ದಾಲಚೀನಿ, ಹತ್ತಿ ಮೊದಲಾದ ವ್ಯಾಪಾರಿ ಬೆಳೆಗಳೂ ಉತ್ಪನ್ನವಾಗುವುವು. ಕಬ್ಬಿಣ, ಮೆಂಗನೀಸ್, ಬಂಗಾರ, ಆ್ಯಸ್ಬೆಸ್ಟೊಸ್, ಸುಣ್ಣ, ಕ್ರೋಮ್, ಅಭ್ರಕ, ನೈಟರ್ ಮುಂತಾದ ಖನಿಜ ಪದಾರ್ಥಗಳೂ ಇಲ್ಲಿ ದೊರೆಯುವುವು.

ಔದ್ಯೋಗಿಕ ಉತ್ಪತ್ತಿಗಳಲ್ಲಿ ಸಾಬೂನು, ಮಂಗಳೂರ ಹಂಚು, ಬಾದಾಮಿಯ ಬಿಳಿಕಲ್ಲು, ರೇಷ್ಮೆ ಮತ್ತು ಅದರ ವಸ್ತು, ನೆಲಗಡಲೆ, ಅದರ ಎಣ್ಣೆ ಮತ್ತು ಹಿಂಡಿ, ತೆಂಗಿನೆಣ್ಣೆ ಮತ್ತು ಹಿಂಡಿ ಇವು ಮುಖ್ಯವಾಗಿವೆ.

ಬೃಹತ್ಕರ್ಣಾಟಕದ ಅಂಶವಾದ ಮೈಸೂರು ಸಂಸ್ಥಾನವು ೩೦ ವರ್ಷಗಳ ಅವಧಿಯಲ್ಲಿ ತನ್ನ ಉತ್ಪನ್ನವನ್ನು ೨ ಕೋಟಿಯಿಂದ ೭ ಕೋಟಿ ರೂಪಾಯಿಗಳವರೆಗೆ ಹೆಚ್ಚಿಸಿದೆ. ಇದಕ್ಕೆ ಕಾರಣ ಆ ಸಂಸ್ಥಾನದ ಸರಕಾರ. ಗಣಿ, ಲೋಹ ಕಾರಖಾನೆ, ಕೃಷಿಗಳ ವಿಕಾಸಕ್ಕೆ ಅದು ಪ್ರೋತ್ಸಾಹ ಕೊಟ್ಟಿರುತ್ತದೆ. ವಿಶಾಲ ಕೃಷಿ ಪ್ರದೇಶಗಳಿಗೆ ನೀರಾವರಿ ಸರಬರಾಯಿಯ ಸೌಕರ್ಯವನ್ನು ಕಲ್ಪಿಸಿಕೊಟ್ಟಿದೆ. ಆದರೆ ಬೊಂಬಾಯಿ ಮದರಾಸು ಸರಕಾರಗಳು ಬ್ರಿಟಿಷ್ ಕರ್ನಾಟಕ ಪ್ರದೇಶಗಳನ್ನು ಈ ದೀರ್ಘ ಅವಧಿಯಲ್ಲಿ ಅಲಕ್ಷಿಸಿವೆ. ಬ್ರಿಟಿಷ್ ಕರ್ನಾಟಕದ ಜಿಲ್ಲೆಗಳು ಮದರಾಸು, ಬೊಂಬಾಯಿ ಪ್ರಾಂತದ ತುಟ್ಟತುದಿಯಲ್ಲಿರುತ್ತ, ಅವರ ಕೂಗು ಆಯಾ ಸರಕಾರಗಳ ಲಕ್ಷ್ಯವನ್ನು ಸೆಳೆಯಲು ಸಾಕಷ್ಟು ಫಲಕಾರಿಯಾಗಿಲ್ಲ.

## ೬. ಆಡಳಿತೆಯ ಸೌಕರ್ಯ

ಮೇಲೆ ಹೇಳಿದಂತೆ ಕನ್ನಡವನ್ನು ಮಾತಾಡುವ ಜನತೆಯನ್ನೆಲ್ಲ, ಇಂದಿನ ಸಂಸ್ಥಾನಗಳು ಯಾ ಇತರ ರಾಜ್ಯ ಪದ್ಧತಿಗಳು ಇರುವಂತೆಯೇ, ಅಥವಾ ಮುಂದೆ ಸ್ವಾಭಾವಿಕ ರಾಜಕೀಯ ವಿಕಾಸವಾಗುವಾಗಲೂ, ಒಂದೇ ಪ್ರಜಾತಂತ್ರಾತ್ಮಕ ಜವಾಬ್ದಾರಿ ಆಡಳಿತೆಯೊಳಗೆ ಒಂದುಗೂಡಿಸುವುದೇ ಈ ಏಕೀಕರಣ ಸಂಘದ ಉದ್ದೇಶವಾಗಿದೆ. ಪ್ರತ್ಯೇಕ ಕರ್ಣಾಟಕ ಪ್ರಾಂತದ ರಚನೆಗೆ ಇಂದು ಇರುವ ದೇಶೀಯ ಸಂಸ್ಥಾನಗಳು ಅಡಚಣೆಯಾಗಿವೆಯೆಂದು ಎತ್ತಿತೋರಿಸಲ್ಪಟ್ಟದೆ; ಆದರೆ ಇದು ತಪ್ಪು ಗ್ರಹಿಕೆ. ದೇಶೀ ಸಂಸ್ಥಾನಗಳನ್ನು ವಿಸರ್ಜಿಸಿದರೆ ಅಥವಾ ಆಯಾ ಭಾಷಾನುಗುಣ ಪ್ರಾಂತಗಳಿಗೆ ಜೋಡಿಸಿದರೆ, ಎಲ್ಲ ಕನ್ನಡಿಗರನ್ನು ಒಂದೇ ಆಡಳಿತೆಯೊಳಗೆ ಒಟ್ಟುಗೂಡಿಸುವ ನಮ್ಮ ಧ್ಯೇಯವು ಪೂರ್ತಿಯಾಗುವುದು. ಆದರೆ ಅದು ಈಗಲೇ ಸಾಧ್ಯವಾಗದು. ಅವುಗಳ ಅಸ್ತಿತ್ವವು ದೇಶದ ಸ್ವಾತಂತ್ರ್ಯ ಹಕ್ಕಿಗೆ ಬಾಧಕವಾಗದಿರುವಾಗ ಆ ಕಾರಣದಿಂದ ಭಾರತೀಯರು ಸ್ವಂತ ಪ್ರಾಂತವನ್ನು ಹೊಂದಿ, ಸ್ವತಂತ್ರ ಆಡಳಿತೆಯನ್ನು ನಡೆಯಿಸಲಿಕ್ಕೆ ಒಂದು ಭಾಷೆಯ ಪ್ರಾಂತದಲ್ಲಿ ಯಾ ಅದರ ಗಡಿಯಲ್ಲಿ ಆ ಸಂಸ್ಥಾನಗಳ ಇರವು ಹೇಗೆ ಬಾಧಕವಾಗುವುದೆಂದು ನಮಗೆ ಹೊಳೆಯುವುದಿಲ್ಲ. ಮೇಲೆ ನಾವು ತಥ್ಯಸಂಖ್ಯೆಗಳಿಂದ ಪ್ರತಿಪಾದಿಸಿರುವಂತೆ ಬ್ರಿಟಿಷ್ ಕರ್ಣಾಟಕದ ವಿಶಾಲ ಪ್ರದೇಶವು ಸ್ವಾವಲಂಬಿಯಾಗಿದ್ದು ಪ್ರತ್ಯೇಕ ಸ್ವತಂತ್ರ ಪ್ರಾಂತವಾಗಲು ಎಲ್ಲಾ ಆವಶ್ಯಕತೆಗಳನ್ನು ಪೂರೈಸಲು ಹೇಗೆ ಸಮರ್ಥವಾಗಿದೆಯೆಂದು ಸ್ಪಷ್ಟೀಕರಿಸಿದೆವು.

ದಕ್ಷಿಣ ಕನ್ನಡ ಜಿಲ್ಲೆಯು ಮದರಾಸಿನಿಂದ ೫೫೦ ಮೈಲು ದೂರದಲ್ಲಿಯೂ, ಉತ್ತರ ಕನ್ನಡ ಜಿಲ್ಲೆಯು ಬೊಂಬೈಯಿಂದ ೪೦೦ ಮೈಲು ದೂರದಲ್ಲಿಯೂ ಇವೆ. ಬಳ್ಳಾರಿ, ಬಿಜಾಪುರಗಳು ತಂತಮ್ಮ ಪ್ರಾಂತಿಕ ಸರಕಾರದ ಕೇಂದ್ರದಿಂದ ದೂರವಾಗಿವೆ. ಶಿಕ್ಷಣ ಇಲಾಖೆಯ ಅಧಿಕಾರಿಗಳಿಂದ ತೊಡಗಿ ಇತರ ಎಲ್ಲಾ ಅಧಿಕಾರಿಗಳೂ ಕರ್ಣಾಟಕದ ಆಯಾ ಪ್ರದೇಶಗಳಲ್ಲಿ ನೇಮಕ ಮಾಡುತ್ತಿದ್ದರೂ ಅವರು ಸ್ಥಳೀಯ ಭಾಷೆಯನ್ನು ಬಲ್ಲವರಾಗಿಲ್ಲ. ಇಂಗ್ಲಿಷೇ ಕೋರ್ಟು ಭಾಷೆಯಾಗಿರುವುದು; ಕಕ್ಷಿಗಾರನು ಆ ಇಂಗ್ಲಿಷನ್ನು ತಿಳಿದವನಲ್ಲ. ಹಲವಾರು ಭಾಷೆಗಳ ಪ್ರದೇಶಗಳನ್ನು ಒಂದೇ ಪ್ರಾಂತದಲ್ಲಿ ಸೇರಿಸಿಬಿಟ್ಟಿರುವ ಕಾರಣ ಇಂಗ್ಲಿಷನ್ನು ಸಾಮಾನ್ಯ ಭಾಷೆಯಾಗಿ ಮಾಡಲು ಅವಕಾಶವಾಯಿತು. ಇದರಿಂದ ಜನರು ತೇಜೋಹೀನರಾಗಿ, ಅವರ ಸಂಸ್ಕೃತಿಯು ನಷ್ಟವಾಗತೊಡಗಿದೆ. ಅಧಿಕಾರಿಗಳು ಕನ್ನಡದ ಶಿಕ್ಷಿತ ಜನರ ಮನಸ್ಸನ್ನು ತಿಳಿಯದ ಕಾರಣ ಕರ್ಣಾಟಕದ ಶಿಕ್ಷಣ ಹಾಗೂ ಸಂಸ್ಕೃತಿಯ ವಿಕಾಸಕ್ಕೆ ವಿಶೇಷ ಧಕ್ಕೆಯುಂಟಾಗಿದೆ. ಕರ್ಣಾಟಕದಲ್ಲಿ ಅನ್ಯಭಾಷೆಯ ಸರಕಾರವು ಅನ್ಯ ಭಾಷೆಯಲ್ಲಿ ಆಡಳಿತೆಯನ್ನು ನಡಸುತ್ತಿರುವುದರಿಂದ ಜನರಿಗಾಗುವ ಅಪಾರ ಕಷ್ಟವನ್ನು ಉಲ್ಲೇಖಿಸುವುದು ಅಸಾಧ್ಯ. ಆದಕಾರಣ ಭಾಷಾನುಗುಣ ಪ್ರಾಂತದ ರಚನೆಯಾಗಿ, ಜನರೆಲ್ಲ ಒಂದಾಗಿ, ಒಂದೇ ರೀತಿ ವರ್ತಿಸಿದರೆ ಕನ್ನಡ ನಾಡಿನಿಂದ ರಾಷ್ಟ್ರೀಯ ಉನ್ನತಿಗೆ ಪುಷ್ಟಿ ದೊರೆಯುವುದೆಂಬುದನ್ನು ಯಾರೂ ನಿರಾಕರಿಸುವಂತಿಲ್ಲ.

ಇಂದು ಕರ್ಣಾಟಕಕ್ಕೆ ವಿಶ್ವವಿದ್ಯಾಲಯವೂ, ಕೃಷಿ ಕಾಲೇಜೂ, ಇಂಜಿನಿಯರಿಂಗ್ ಕಾಲೇಜೂ ಇಲ್ಲ. ಇಂದು ಮದರಾಸು ಆಧಿಪತ್ಯದಲ್ಲಿ ಕನ್ನಡಿಗರು ಕೇವಲ ಸೇಕಡಾ ೫; ಬೊಂಬೈಯಲ್ಲಿ ಸೇಕಡಾ ೧೨. ಮುಂಬಯಿಯ ಪ್ರಾಂತೀಯ ಅಸೆಂಬ್ಲಿಯ ೧೭೫ ಮಂದಿಯಲ್ಲಿ ಕರ್ಣಾಟಕದ ಪ್ರತಿನಿಧಿಗಳು ಕೇವಲ ೨೯ ಮಂದಿ; ಅಲ್ಲಿಯ ಕೌನ್ಸಿಲಿನಲ್ಲಿ ೨೬ರಲ್ಲಿ ಕೇವಲ ೪ ಮಂದಿ ಕರ್ಣಾಟಕರ ಸದಸ್ಯರು. ಮದರಾಸು ಅಸೆಂಬ್ಲಿಯಲ್ಲಿ ೨೧೫ರಲ್ಲಿ ಕೇವಲ ೧೨ ಮಂದಿ ಕರ್ಣಾಟಕದ ಪ್ರತಿನಿಧಿಗಳು; ಕೌನ್ಸಿಲಿನಲ್ಲಿ ೫೪ರಲ್ಲಿ ೨ ಮಂದಿ ಮಾತ್ರ ಕರ್ಣಾಟಕರು. ಡಿಲ್ಲಿಯ ಕೇಂದ್ರ ಅಸೆಂಬ್ಲಿಯಲ್ಲಿ ೧೪೨ರಲ್ಲಿ ಕೇವಲ ಇಬ್ಬರು ಕರ್ಣಾಟಕದ ಸದಸ್ಯರು; ಕೌನ್ಸಿಲ್ ಆಫ್ ಸ್ಟೇಟಿನಲ್ಲಿ ಈಗ ಯಾವ ಪ್ರತಿನಿಧಿಯೂ ಇಲ್ಲ. ೧೯೩೫ನೆಯ ಇಂಡಿಯ ಸರಕಾರದ ಆಕ್ಟಿನಮೇರೆಗೆ ಫೆಡರಲ್ ಅಸೆಂಬ್ಲಿಯಲ್ಲಿ ೩೭೫ ಸದಸ್ಯರಲ್ಲಿ ೬ಕ್ಕಿಂತ ಹೆಚ್ಚು ಕರ್ಣಾಟಕರು ಇರಲಾರರು; ಫೆಡರಲ್ ಕೌನ್ಸಿಲಿನಲ್ಲಿ ಕರ್ಣಾಟಕವು ಒಂದೇ ಒಂದು ಪ್ರಾತಿನಿಧ್ಯ ಪಡೆಯಲೂ ಆಶಿಸಲಿಕ್ಕೆ ಎಡೆಯಿಲ್ಲವಾಗಿದೆ. ಆದರೂ ಬ್ರಿಟಿಷ್ ಕರ್ಣಾಟಕಕ್ಕಿಂತಲೂ ದೇಶೀ ಸಂಸ್ಥಾನಗಳು ಫೆಡರಲ್ ಅಸೆಂಬ್ಲಿ ಮತ್ತು ಕೌನ್ಸಿಲುಗಳಿಗೆ ಹೆಚ್ಚಿನ ಪ್ರತಿನಿಧಿಗಳನ್ನು ಕಳುಹಲು ಆಸ್ಪದವಿದೆ!

ಈಗ ಪ್ರಸ್ತಾಪಿಸಿರುವ ಕರ್ಣಾಟಕ ಪ್ರಾಂತದಲ್ಲಿ ಜನತೆಯ ಶೇಕಡಾ ೬೬ರಷ್ಟು ಹುಟ್ಟು ಕನ್ನಡಿಗರು; ಅವರ ತಾಯಿನುಡಿ ಕನ್ನಡವಾಗಿದೆ. ಶೇಕಡಾ ೧೭ರಷ್ಟು ತುಳುವರು, ಕೊಂಕಣಿಗರು, ಬಡಗರು, ಕೊಡಗರು, ಇವರ ತಾಯಿನುಡಿಗಳಿಗೆ ಲಿಪಿಯಿಲ್ಲದ ಪ್ರಯುಕ್ತ ಇವರು ಅನಾದಿಯಿಂದಲೂ ಕನ್ನಡವನ್ನೇ ವ್ಯವಹಾರ್ಯ ಭಾಷೆಯಾಗಿ ಅಂಗೀಕರಿಸಿ ಬಳಸುತ್ತಿರುವರು. ಉಳಿದ ೧೭ರಷ್ಟು ಮಂದಿ ವ್ಯಾಪಾರಿಗಳು, ಸರಕಾರಿ ನೌಕರರು, ತೋಟಗಳ ಕೂಲಿಗಳು, ಆಗಿದ್ದು ಕರ್ಣಾಟಕ ಪ್ರಾಂತದಲ್ಲಿ ನೆಲಸಿಕೊಂಡಿರುವರು. ಕರ್ಣಾಟಕ ಪ್ರಾಂತದ ಕೇಂದ್ರದಿಂದ ಯಾವ ಪ್ರದೇಶವಾಗಲಿ, ಜಿಲ್ಲೆಯಾಗಲಿ ೨೦೦ ಮೈಲುಗಳಿಗಿಂತ ಹೆಚ್ಚಿಗೆ ದೂರವಾಗಿರುವುದಿಲ್ಲ. ದೇಶೀ ಸಂಸ್ಥಾನಗಳಿದ್ದರೂ ಹಿಂದೆ ಹೇಳಿದಂತೆ ನಮ್ಮ ಆಡಳಿತೆಗೆ ಬಾಧಕವಿಲ್ಲವೆಂದು ನಾವು ಮನಗಂಡಿರುವೆವು. ಅಲ್ಲದೆ ಅವುಗಳಲ್ಲಿ ಹೆಚ್ಚಿನವು, ವಿಶೇಷವಾಗಿ ಮೈಸೂರು, ಕನ್ನಡ ಭಾಷೆಯ, ಸಂಸ್ಕೃತಿಯ, ಉದ್ಯೋಗದ, ವ್ಯಾಪಾರದ ಮತ್ತು ಮಾರ್ಗಸೌಕರ್ಯದ ವಿಕಾಸಕ್ಕೆ ಹೆಚ್ಚಿನ ಹುರುಪು ಕೊಟ್ಟಿದೆ. ನಿಜಾಂಶವೆಂದರೆ, ಮೈಸೂರು ಸಂಸ್ಥಾನವಿರದಿದ್ದರೆ ಕನ್ನಡ ಭಾಷೆ ಸಂಸ್ಕೃತಿಗಳು ಎಂದೋ ಮದರಾಸು ಬೊಂಬಾಯಿ ಪ್ರಾಂತೀಯ ಸರಕಾರಗಳ ಕೈಕೆಳಗೆ ಮಾಯವಾಗಿ ಹೋಗುತ್ತಿದ್ದುವು.

ಆದಕ್ಕಾಗಿಯೇ ಭಾಷಾನುಗುಣ ಪ್ರಾಂತ ರಚನೆಯಾಗಿ, ಆಯಾ ಪ್ರದೇಶಗಳ ಗಡಿಗಳ ಪುನರ್ನಿರ್ದೇಶವಾಗಿ, ತನ್ಮೂಲಕ ಒಂದೇ ಭಾಷೆಯ ಜನತೆಗೆ ಸ್ವಾಭಿಪ್ರಾಯ ಪ್ರದರ್ಶನಕ್ಕೂ, ಸಾಂಸ್ಕೃತಿಕ ಸ್ವಾಧೀನತೆಗೂ ಅವಕಾಶವಾಗಬೇಕೆಂದು ನಮ್ಮ ಈ ಸಭೆಯು ಸಾರುತ್ತದೆ.

ಕನ್ನಡಿಗರ ಈ ಬೇಡಿಕೆಯು ಮಹಾತ್ಮ ಗಾಂಧಿ, ಶ್ರೀ॥ ಗಳಾದ ಎನ್. ಸಿ. ಕೇಳ್ಕರ್, ಡಾ॥ ಕುರ್ತುಕೋಟಿ ಶಂಕರಾಚಾರ್ಯ, ಸುಭಾಷ್ ಚಂದ್ರ ಬಸು, ಡಾ॥ ಪಟ್ಟಾಭಿ ಸೀತಾರಾಮಯ್ಯ, ದಿವಂಗತ ಸತ್ಯಮೂರ್ತಿ, ಡಾ॥ ಯು. ರಾಮರಾವ್, ಎಂ. ಎಸ್. ಆಣೆ, ದಿವಂಗತ ಆಚಾರ್ಯ ಪಿ. ಸಿ. ರಾಯ್, ಡಿ. ವಿ. ಗುಂಡಪ್ಪ, ಗಂಗಾಧರರಾವ್ ದೇಶಪಾಂಡೆ, ಕೆ. ವಿ. ಮುನ್ಶಿ, ಎ. ಬಿ. ಲಟ್ಟೆ, ಎಸ್. ಎ. ಬ್ರೇಲ್ವಿ ಮತ್ತು ಇನ್ನಿತರ ಮಹನೀಯರಿಂದ ಸಮರ್ಥಿಸಲ್ಪಟ್ಟಿದೆ. ಹಲವು ಸ್ಥಳ ಕಾಲಗಳಲ್ಲಿ ಜರಗಿದ ಸಮ್ಮೇಲನಗಳಲ್ಲಿ ಸರ್ ಎಸ್. ಟಿ. ಕಟ್ಟಿ, ಶ್ರೀ॥ ಪಂಡಿತ ರಾಯಪ್ಪ ಚಿಕ್ಕೋಡಿ, ಎಸ್. ಜಿ. ಹಲಕಟ್ಟಿ, ಎ. ರಂಗನಾಥ ಮೊದಲಿಯಾರ್, ಕೆ. ಆರ್. ಕಾರಂತ, ಡಾ॥ ನಾಗಣ್ಣಗೌಡ ಮೊದಲಾದವರು ಅಧ್ಯಕ್ಷರಾಗಿರುವರು.

ಭಾಗ V ರಿಂದ VII.

ಭಾಗ I, II ರಲ್ಲಿ ಹೇಳಿದ ಕಾರಣಗಳಿಂದ ಈ ಪ್ರಶ್ನೆಗಳಿಗೆ ನಾವು ಉತ್ತರ ಕೊಡಲಿಲ್ಲ.

## ಕರ್ಣಾಟಕ ಪ್ರಾಂತಕ್ಕೆ ಸಂಬಂಧಪಟ್ಟ ಕೆಲವು ಅಂಕೆ ಸಂಖ್ಯೆಗಳು

### ಕರ್ಣಾಟಕ ಪ್ರಾಂತದಲ್ಲಿ ಮಿಶ್ರಿತವಾಗಿರುವ ಭಾಷೆಗಳು

| ಭಾಷೆ | |
|---|---|
| ಕನ್ನಡ .. | 65·72% |
| ಮರಾಠಿ .. | 6·95% |
| ತೆಲುಗು .. | 6·08% |
| ತುಳು .. | 5·84% |
| ಕೊಂಕಣಿ .. | 5·48% |
| ಮಲೆಯಾಳ .. | 5·42% |
| ತಮಿಳು .. | 1·42% |
| ಕೊಡಗು .. | 0·44% |
| ಇತರ ಭಾಷೆಗಳು .. | 2·65% |
| ಒಟ್ಟು .. | 100 |

## ಬ್ರಿಟಿಷ್ ಕರ್ಣಾಟಕದ ವಿಸ್ತೀರ್ಣ ಮತ್ತು ಜನಸಂಖ್ಯೆ

(ಆರ್. ಬಿ. ಕುಲಕರ್ಣಿಯವರ 'ಕನ್ನಡಿಗ'ನ ಸರ್ವಸ್ವದಿಂದ)

| ಜಿಲ್ಲೆಗಳು | ಚ. ಮೈಲಿ | ಕ. ಜನಸಂಖ್ಯೆ |
|---|---|---|
| 1. ದಕ್ಷಿಣ ಕನ್ನಡ .. | 4,021 | 11,95,227 |
| 2. ಕೊಡಗು .. | 1,582 | 1,74,976 |
| 3. ಬಳ್ಳಾರಿ .. | 5,713 | 9,69,436 |
| 4. ನೀಲಗಿರಿ, ವಯನಾಡು ಕೊಳ್ಳೆಗಾಲ .. | 4,107 | 10,18,618 |
| 5. ಮದಗಶಿರ ಮತ್ತು ಪತ್ತಿಕೊಂಡ .. | 5,324 | 7,65,000 |
| 6. ಹೊಸೂರು, ಉ. ಆರ್ಕಾಟು ಚಿತ್ತೂರು ಮತ್ತು ಸೇಲಂಮಿನ ಕೆಲವು ಭಾಗಗಳು .. | 3,200 | 7,50,000 |
| 7. ಉತ್ತರ ಕನ್ನಡ .. | 3,946 | 40,717 |
| 8. ಬೆಳಗಾಂವಿ .. | 4,611 | 9,52,996 |
| 9. ಧಾರವಾಡ .. | 4,606 | 10,36,924 |
| 10. ಬಿಜಾಪುರ ಮತ್ತು ಸೊಲ್ಲಾಪುರ .. | 6,507 | 9,46,876 |
| ಒಟ್ಟು .. | 43,615 | 82,11,780 |

| | | | |
|---|---|---|---|
| ಹೈದರಾಬಾದು | .. | 26,400 | 16,20,094 |
| ಮೈಸೂರು | .. | 29,475 | 58,06,193 |
| ಇತರ | .. | | 1,231 |
| ಒಟ್ಟು | .. | 99,490 | 1,56,38,067 |

## ಭಾಷಾವಾರು ಜನಸಂಖ್ಯೆಯಲ್ಲಿ ಕನ್ನಡಿಗರ ಸ್ಥಾನ

1. ಹಿಂದಿ ಬಿಹಾರಿ ಕೂಡ .. 107,340,733
2. ಬಂಗಾಳ .. 53,468,469
3. ತೆಲುಗು .. 26,373,727
4. ಮರಾಠಿ .. 20,889,658
5. ತಮಿಳು .. 20,411,652
6. ಪಂಜಾಬಿ .. 15,839,254
7. ಕನ್ನಡ .. 15,632,067

ಹಿಂದೂ ಸ್ಥಾನವನ್ನು ಭಾಷಾವಾರು ಪ್ರಾಂತ್ಯ ಪ್ರಕಾರ ವಿಂಗಡಿಸಿದರೆ ಕರ್ಣಾಟಕವು 7ನೆಯ ಪ್ರಾಂತವಾಗಬೇಕು.

## ವಿಸ್ತೀರ್ಣ ಜನಸಂಖ್ಯೆ ಆದಾಯ ವೆಚ್ಚಗಳ ಹೋಲಿಕೆ

| ಪ್ರಾಂತಗಳು | | ವಿಸ್ತೀರ್ಣ | ಜನಸಂಖ್ಯೆ | ಆದಾಯ ರೂ. | ಖರ್ಚು ರೂ. | ಕೇಂದ್ರ ಸರಕಾರದ ಧನ ಸಹಾಯ ರೂ. (1939–40)ರ ಕೇಂದ್ರ ಬಜೆಟ್ |
|---|---|---|---|---|---|---|
| ಅಸ್ಸಾಮು | .. | 55,014 | 8,622,251 | 2,84,45,000 | 3,01,84,000 | 30,00,000 |
| ಸಿಂಧ್ | .. | 46,378 | 3,887,070 | 3,83,23,000 | 3,76,35,000 | 1,05,00,000 |
| ಒರಿಸ್ಸಾ | .. | 13,700 | 5,306,142 | 1,89,57,000 | 1,84,37,000 | 43,00,000 |
| ವಾಯುವ್ಯ ಗಡಿಪ್ರಾಂತ್ಯ | .. | 13,518 | 2,425,076 | 1,79,69,000 | 1,85,39,000 | 1,00,00,000 |
| ಬ್ರಿಟಿಷ್ ಕರ್ಣಾಟಕ | .. | 47,778 | 8,258,340 | 2,62,48,000 (ಅಂದಾಜು) | 2,11,00,000 (ಅಂದಾಜು) | 1,16,000 (ಕೊಡಗಿಗೆ ಮಾತ್ರ) |

ಕರ್ಣಾಟಕದ ಸರಿಯಾದ ಆದಾಯ ಮತ್ತು ವೆಚ್ಚದ ವಿವರವು ಮದರಾಸು, ಮುಂಬಯಿ ಮತ್ತು ಕೇಂದ್ರ ಅಸೆಂಬ್ಲಿಗಳಲ್ಲಿ ಪ್ರಶ್ನೆ ಹಾಕಿದರೂ ಸಿಗಲಿಲ್ಲ. ಮೇಲಿನ ಎಲ್ಲಾ ಪ್ರಾಂತ್ಯಗಳು ಸಾಲ ಪಡೆದಿರುತ್ತವೆ. ಕರ್ಣಾಟಕ ಪ್ರಾಂತ್ಯವು ಸಾಲಕ್ಕೆ ಹೊಣೆಯಾಗುವ ಯಾವ ಕಾರಣಗಳೂ ಇಲ್ಲ.

## ಮದರಾಸು ಅಸೆಂಬ್ಲಿಯಲ್ಲಿ ಶ್ರೀ॥ ಕೆ. ಆರ್. ಕಾರಂತರ ಪ್ರಶ್ನೆಗಳಿಗೆ ತಾ॥ 21–11–1938 ರಲ್ಲಿ ಕೊಟ್ಟ ಉತ್ತರದ ಮೇರೆಗೆ (ಸಂಖ್ಯೆಗಳು ಲಕ್ಷ ರೂಪಾಯಿಯಲ್ಲಿ) (1936-37 ನೆಯ ವರ್ಷದ ಲೆಕ್ಕ ಪ್ರಕಾರ)

| ಜಿಲ್ಲೆಗಳು | | ಆದಾಯ | | | | | | ಖರ್ಚು | | | | | ಉಳಿತಾಯ |
|---|---|---|---|---|---|---|---|---|---|---|---|---|---|
| | | ಭೂತೆರಿಗೆ | ಶೇಂದಿ | ಸ್ಟಾಂಪು | ರಿಜಿಸ್ಟ್ರಿ | ಇತರ ಉತ್ಪತ್ತಿ | ಒಟ್ಟು ಉತ್ಪತ್ತಿ | ವಿದ್ಯೆ | ಔಷಧಿ | ರಸ್ತೆ ಇತ್ಯಾದಿ | ಇತರ ಖರ್ಚು | ಒಟ್ಟು ಖರ್ಚು | |
| ದ. ಕನ್ನಡ | .. | 24·70 | 10·35 | 6·01 | ·88 | 2·14 | 44·08 | 9·79 | 1·74 | 2·84 | 3·10 | 17·47 | +26 61 |
| ನೀಲಗಿರಿ | .. | 1·66 | 5·50 | 1·23 | ·12 | 2·02 | 10·53 | 2·41 | 2·00 | 1·66 | 2·87 | 9·14 | +1·39 |
| ಬಳ್ಳಾರಿ | .. | 16·44 | 12·82 | 3·06 | ·48 | 1·07 | 33·87 | 4·77 | 1·25 | 2·36 | 3·37 | 11·75 | +22·12 |

1944–45ರಲ್ಲಿ ದಕ್ಷಿಣ ಕನ್ನಡದ ಪ್ರಾಂತಿಕ ಉತ್ಪತ್ತಿಯು ಸೇಲ್ಸ್‌ಟ್ಯಾಕ್ಸು ಇತ್ಯಾದಿ ತೆರಗಳ ದೆಸೆಯಿಂದ 65 ಲಕ್ಷಕ್ಕೆ ಮೀರಿದೆ. ಮೇಲಿನ ವಿವರಗಳಲ್ಲಿ ಸಾಮುದಾಯಿಕ ಉತ್ಪತ್ತಿ ಮತ್ತು ಖರ್ಚುಗಳು ಸೇರಲಿಲ್ಲ.

New Delhi
9–2–1945

K. B. JINARAJA-HEGDE
President
Karnataka Unification Sabha, Dharwar

# ಕನ್ನಡಿಗರ ವಿಶ್ವ ಸಂದೇಶ

೧೨ನೆಯ ಶತಮಾನದಲ್ಲಿ ಮಹಾ ಧರ್ಮಕ್ರಾಂತಿ ನಡೆದಿತ್ತೆಂಬುದು ಚರಿತ್ರ ವಿದಿತ. ವೈದಿಕ, ಭೌದ್ಧ, ಜೈನ ಧರ್ಮಗಳ ಕಾದಾಟ, ತಿಕ್ಕಾಟ ತೀವ್ರವಾಗಿ ನಡೆದಿತ್ತು. ಚಾರ್ವಾಕ ವಿಷಯಸುಖಾನಂದ ತತ್ವ ಹರಡಿತ್ತು. ಆಸ್ತಿಕತ್ವವು ನಾಶವಾಗಿ, ನಾಸ್ತಿಕತ್ವವು ಪ್ರಬಲವಾಗಿತ್ತು. ಇಂತಹ ವಿಷಮಪರಿಸ್ಥಿತಿಯಲ್ಲಿ ಸರ್ವಧರ್ಮಗಳ ಸತ್ಯಾರ್ಥ ತತ್ವವನ್ನು ಸಮನ್ವಯ ಮಾಡುವ ಭಾರ ಕನ್ನಡ ನಾಡಿನಮೇಲೆ ಬಿತ್ತು. ಧರ್ಮಕಾಮಿಗಳು, ಕರ್ಮವೀರರಾದ ಕನ್ನಡಿಗರು, ಎಷ್ಟು ಚೆಂದವಾಗಿ, ಅಂದವಾಗಿ, ಮುಚ್ಚುಮರೆಯಿಲ್ಲದೆ ಕೇಳಿದೊಡನೆ ಎಲ್ಲರಿಗೂ ಅರ್ಥವಾಗಿ ಮನಮುಟ್ಟುವಂತೆ ಮುತ್ತಿನಂತಹ ಮುದ್ದುಮಾತುಗಳಿಂದ ವಿಶ್ವಸಮ್ಮತವಾದ ತತ್ವವನ್ನು ಬೋಧಿಸಿದರು! ಜನ ಜಾಗೃತಿಗೋಸುಗ ತಮ್ಮ ತಾಯಿನುಡಿಯಲ್ಲೆ ವಿಶ್ವಪ್ರೇಮ ಗಾನವನ್ನು ಮಾಡಿ, ಕನ್ನಡ ನುಡಿಯ ಸೊಬಗು, ಸಿಂಗಾರ, ಬಿಕ್ಕಟ್ಟು, ಮಾಧುರ್ಯ ನಾವೀನ್ಯವನ್ನು ಹೊರಚಿಮ್ಮಿದರು. ಆದರೆ, ನಮ್ಮ ದುರದೃಷ್ಟದಿಂದ, ವಚನ ವಾಙ್ಮಯ, ಕೆಲಕಾಲ ಕುಲ, ಮತ, ಕಟ್ಟುಗಳ ಪಾಶಕ್ಕೆ ತುತ್ತಾಗಿ ತುಂಡು ತುಂಡಾಗಿ ಅಡಗಿ ಹೋಗಿತ್ತು. ಪುನಃ ನಮ್ಮ ಸುದೈವದಿಂದ ರಾವ್‌ಬಹುದ್ದೂರ್ ಶ್ರೀ॥ ಹಳಕಟ್ಟಿ ಅವರು ಬಹಳ ಪ್ರಯಾಸಪಟ್ಟು ಮಠಗಳಲ್ಲಿ ಗೆದ್ದಲು ಪಾಲಾಗಿದ್ದ ತಾಳೆಯ ಗರಿಗಳ ಪ್ರತಿಗಳನ್ನು ಶೇಖರಿಸಿ ಪರಿಶೋಧಿಸಿ ಪರಿಷ್ಕರಿಸಿ ತಮ್ಮ "ಶಿವಾನು ಭವ" ಪತ್ರಿಕೆಯಲ್ಲಿ ವಚನಗಳನ್ನು ಪ್ರಕಟಿಸುತ್ತಾ ಬಂದರು. ಕನ್ನಡಿಗರ ಪುಣ್ಯ ಫಲಿಸಿತು. ಸಿರಿಗನ್ನಡದೇವಿ ಸಾಕ್ಷಾತ್ಕಾರವಾದಳು. ಕನ್ನಡಿಗರು ವಚನ ಕನ್ನಡಿಯಲ್ಲಿ ತಮ್ಮ ದಿವ್ಯ ನಿಜರೂಪವನ್ನು ಕಂಡರು. ಅಭಿಜ್ಞಾನಿಗಳಾದರು. ಶ್ರೀ॥ ಶ್ರೀನಿವಾಸಮೂರ್ತಿಗಳು "ವಚನ ಧರ್ಮಸಾರ"ದಲ್ಲಿ ವಚನದ ಮಹತ್ವವನ್ನು ಒರೆಗಲ್ಲಿಗೆ ಒರೆದು, ತೀಡಿ, ತುಲನಮಾಡಿ, ವಚನಧರ್ಮ ವಿಶ್ವಧರ್ಮವೆಂದು ಸಾರಿರುವರು. ಶ್ರೀ॥ ರಂಗನಾಥ ದಿವಾಕರರು ವಚನ ಶಾಸ್ತ್ರದ ಉಜ್ಜ್ವಲ ತತ್ವಗಳನ್ನು ಉಪನಿಷತ್ತುಗಳಿಗೆ ಸಮವೆಂದು ಬಣ್ಣಿಸಿರುವರು. ಶ್ರೀ॥ ಲಕ್ಷ್ಮಣರಾಯ ಹೊಯಿಸಳರು "ವಚನ ಬಸವನ ಮೊಲ್ಲೆಸುರಗಿಯು। ಸುಚಿಯು ಸುರಭಿಯು। ಸುಲಭ ಮೋಹಕ। ವಚನ ಜ್ಞಾನದ ಸುಧೆಯು ಕ್ಷೀರವು। ವಚನ ಚೇತನ ಜೋತಿಯು" ಎಂದು ಕೊಂಡಾಡಿರುವರು. ಶ್ರೀ॥ ಆಲೂರು ವೆಂಕಟರಾಯರು ಬಸವಣ್ಣನವರು ಭಾಷಾಜನಕರೆಂದು ವಚನ ಸಾಹಿತ್ಯದ ಹೆಚ್ಚಳವನ್ನು ನುಡಿದಿರುವರು. ರಿವರೆಂಡು ಚನ್ನಪ್ಪ ಉತ್ತಂಗಿ ಅವರು "ಅನುಭವ ಮಂಟಪ" ವಚನಸಾಹಿತ್ಯ ವಿಷಯವಾಗಿ ಉಜ್ವಲವಾದ ಲೇಖನಗಳನ್ನು ಬರೆದಿರುವರು.

"ಕರಿಯನಿತ್ತೊಡೆ ಒಲ್ಲೆ, ಸಿರಿಯನಿತ್ತೊಡೆ ಒಲ್ಲೆ, ಹಿರಿದಪ್ಪ ರಾಜ್ಯವನಿತ್ತೊಡೆ ಒಲ್ಲೆ, ನಿಮ್ಮ ಶರಣರ ಸೂಳು ನುಡಿಯ ಒಂದರಗಳಿಗೆ ಇತ್ತಡೆ ನಿನ್ನನಿತ್ತೆ ಕಾಣಾ ರಾಮನಾಥ" ಎಂದು ಜ್ಞಾನಿಗಳೇ ಹಿಗ್ಗಿ ಹಂಬಲಿಸಿರುವರು. ವಚನಗಳನ್ನು, ಧರ್ಮ ಪಿಪಾಸುಗಳು, ಕರ್ಮಯೋಗಿಗಳು, ನೀತಿ ವಿದ್ಯಾವಿಮರ್ಶಕರು, ಸಾಹಿತಿಗಳು ಈ ರೀತಿಯಾಗಿ ಬಣ್ಣಿಸಲು ಕಾರಣವೇನು? ವಚನಗಳು ದೊಡ್ಡ ಷಟ್ಪದಿಗಳ ಕಾವ್ಯವಲ್ಲ! ವಿಷಯಾನಂದವನ್ನುಂಟುಮಾಡುವ ಕಥೆಗಳಲ್ಲ! ವಚನಗಳು ಪುಂಡರಾಲಿಪ ಕಥೆಗಳಲ್ಲ. ಭಾವಕರು, ಭಕ್ತರು, ಬಲ್ಲಿದರು ಕೇಳುವ ಉಪನಿಷತ್ತುಗಳು; ಜ್ಞಾನ ಸಾಧನೆಯ ಮೆಟ್ಟಲುಗಳು. ಲೋಕಕಲ್ಯಾಣದ ಸೂತ್ರಗಳು! ಶ್ರೀ ಬಸವಣ್ಣನವರು ಧರ್ಮ ಸಂಶೋಧನೆ ಮಾಡಲು ಕಲ್ಯಾಣ ಪಟ್ಟಣದಲ್ಲಿ ಸ್ಥಾಪಿಸಿದ "ಅನುಭವ ಮಂಟಪ"ದಲ್ಲಿ ಆತ್ಮ ಆತ್ಮ ಮಥನಿಸಿ, ಕುಲ, ಮತ, ವೃತ್ತಿ, ಸ್ತ್ರೀ ಪುರುಷ ಬೇಧ ತೋರದು. ಕಾಶ್ಮೀರ, ವಂಗ, ಕಳಿಂಗ, ಆಂಧ್ರ, ತಮಿಳು, ಗುಜರಾತು ಎಲ್ಲಾ ಪ್ರಾಂತಗಳಿಂದ ಬಂದ ಸತ್ಯ ಶರಣರು, ಅನುಭವಿಗಳು, ಧರ್ಮ ಬೋಧನೆ ಮಾಡಿ ನುಡಿದಂತೆ ನಡೆದು, ನಿರ್ಜೀವವಾಗಿದ್ದ ಧರ್ಮಕ್ಕೆ ಜೀವಕಳೆಯ ತುಂಬಿ ಸಾರಿದ ವಿಶ್ವಪ್ರೇಮ ಸಂದೇಶವು ವಿಶ್ವ ಮೋಹಕವಲ್ಲದಿಪ್ಪುದೆ! ವಿಶ್ವ ಸಮ್ಮತವಲ್ಲದಿಪ್ಪುದೆ!

ವಚನಗಳ ಸಂದೇಶವನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ಅದು ಇದೆ: "ದಯವಿಲ್ಲದ ಧರ್ಮ ಅದು ಯಾವುದಯ್ಯ, ದಯವೇ ಧರ್ಮದ ಮೂಲವಯ್ಯ; ದಯವೇ ಬೇಕು ಸಕಲ ಪ್ರಾಣಿಗಳಲ್ಲಿ"; "ಕಾಯಕವೇ

ಕೈಲಾಸ"ವೆಂದು ಬಣ್ಣಿಸಿ (Work is Worship) ಎಲ್ಲ ಕೈ ಕಸುಬುಗಳ ಸಾಮಾನ್ಯ ಜನರನ್ನು ಮನ್ನಿಸಿದರು. ಕುಲ, ಮತಗಳ ಗರ್ವವನ್ನು ಮುರಿದಿಕ್ಕಿ ಗುಣಕ್ಕೆ ಸತ್ಕ್ರಿಯಾಚರಣೆಗೆ ಪ್ರಥಮ ಸ್ಥಾನವನ್ನು ಕೊಟ್ಟು ಸಮತಾ ತತ್ವವನ್ನು ಬಸವಣ್ಣನವರು ತಮ್ಮ ವಿಶ್ವ ಹೃದಯದಿಂದ "ಉತ್ತಮ ಕುಲದಲ್ಲಿ ಹುಟ್ಟಿದನೆಂಬ ಕಷ್ಟತರದ ಹೊರೆ ಹೊರಿಸದಿರಯ್ಯ", "ಎನಗಿಂತ ಕಿರಿಯ ರಿಲ್ಲ, ಶಿವ ಶರಣರಿಗಿಂತ ಹಿರಿಯರಿಲ್ಲ" "ಸ್ವಪಚನಾದರು ಶಿವಭಕ್ತನೆ ಕುಲಜ", "ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗಮನ ಶರಣರೆ ಕುಲ ಜರು" ಎಂದು ನುಡಿದು, ನುಡಿದಂತೆ ನಡೆದು ಲೋಕ ಪೂಜ್ಯನಾಗಿರುವನು.

ನಂಬಲರಿಯದೆ, ನಂಬದೆ, ನಾಸ್ತಿಕರಾದ ವಿತರ್ಕ ವಾದಿಗಳ ಹೃದಯದಲ್ಲಿ ನಂಬಿಕೆ ಒಡೆದು ಮೂಡುವಂತೆ "ನಂಬಿ ಕರೆದರೆ ಓ ಎಂದು ಓಡಿಬಾರನೆ ಶಿವನು" ಎಂದು ಬಸವಣ್ಣ ಢಣಾಢಂಗುರವ ಸಾರಿದ, ಆಸ್ತಿಕ ತತ್ವ ವನ್ನು ತೋರಿದ ದೈವಭಕ್ತ. ಭಕ್ತ ಭಂಡಾರಿಯಾಗಿ "ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕೂಡಲ ಸಂಗಮದೇವ, ನಿಮ್ಮ ಚರಣಕಮಲದೊಗಾನು ತುಂಬಿ" ಎಂದು ಮೃದುಮಧುರವಾದ ಸಾಹಿತ್ಯ ಸಂಗೀತಗಳ ಶ್ರುತಿ ಗೂಡಿಸಿ ಹೃದಯ ವೀಣೆಯ ನುಡಿಸಿ ಭಕ್ತಿಸುಧೆಯನ್ನು ಎಲ್ಲರ ಮನದಲ್ಲಿ ತುಂಬಿದ ತುಂಬಿ ಬಸವಣ್ಣ; "ಭಕ್ತಿ ಎಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು, ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿ ಎಂಬ ಹಣ್ಣಾಯಿತ್ತು, ನಿಷ್ಪತ್ತಿ ಎಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ, ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ" ಎಂದು ಮೋಕ್ಷಾನುಭವ ಪಡೆದ ಜ್ಞಾನಯೋಗಿ ಬಸವಣ್ಣ.

ಈ ಲೋಕವು 'ಮಿಥ್ಯ', 'ಮಾಯಾ' ಎಂದು ಹೇಳುವ ದುರುಳ ವೇದಾಂತಿಗಳಿಗೆ "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" "ದೇವಲೋಕ ಮರ್ತ್ಯಲೋಕವೆಂಬುವು ಬೇರಿಲ್ಲ ಕಾಣಿರೋ; ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿಯುವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ; ಅನಾಚಾರವೇ ನರಕ" ಎಂದು ಜೀವನದ ನೀತಿ, ರೀತಿ, ಸೌಂದರ್ಯವನ್ನು ಸಾರಿದರು. ಹುಟ್ಟುಕುರುಡ ಮೂಢಾಚಾರಗಳನ್ನು ನೋಡಿ "ಕಲ್ಲನಾಗರ ಕಂಡರೆ ಹಾಲನೆರೆ ಎಂಬರು, ದಿಟನಾಗರ ಕಂಡರೆ ಕೊಲ್ಲೆಂಬ ರಯ್ಯ, ಉಂಬ ಜಂಗಮ ಬಂದರೆ ನಡೆ ಎಂಬರು ಉಣ್ಣದ ಲಿಂಗಕ್ಕೆ ಬೋನವನಿಡಿ ಎಂಬರಯ್ಯ" ಎಂದು ಹೀಯಾಳಿಸಿ ಜ್ಞಾನಬೋಧನೆ ಮಾಡಿದರು.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ, ಶಿವಭಕ್ತ ರಾದವರನೆಲ್ಲರನೊಂದೆಯೆಂಬೆ" ಎಂದು ಅಂತ್ಯಜರ ಉದ್ಧಾರಕ್ಕಾಗಿ ಆತ್ಮಾರ್ಪಣೆ ಮಾಡಿ "ನ್ಯಾಯ ನಿಷ್ಠುರ, ದಾಕ್ಷಿಣ್ಯಪರ ನಾನಲ್ಲ, ಲೋಕ ವಿರೋಧಿ, ಶರಣ ನಾರಿಗಂಜುವನಲ್ಲ, ಕೂಡಲ ಸಂಗಮ ದೇವರ ರಾಜ ತೇಜದಲ್ಲಿಪ್ಪನಾಗಿ"; "ನಾಳೆ ಬರುವುದು ನಮಗಿಂದು ಬರಲಿ" ಎಂದು ನುಡಿದ ಅಭಯ ತತ್ವದ ಮಹತ್ವ ತೋರಿದ ಮಹಾತ್ಮ ಬಸವಣ್ಣ.

ಆಂಧ್ರ ಬ್ರಾಹ್ಮಣನಾದ ಕವಿಪುಂಗವ ಶ್ರೀ ಪಾಲು ಕುರಿಕಿ ಸೋಮನಾಥನು ಬಸವ ತತ್ವದ ಮಹತ್ವಕ್ಕೆ ತಲೆ ಬಾಗಿ ತೆಲುಗಿನಲ್ಲಿ ಬಸವ ಪುರಾಣವನ್ನು ಮೊತ್ತಮೊದಲು ಬರೆದು ತೆಲುಗು ದೇಶದಲ್ಲೆಲ್ಲಾ ಕನ್ನಡ ಕರ್ಮಯೋಗಿಯ ಮಹಿಮೆಯನ್ನು ಸಾರಿದುದು ಕನ್ನಡಿಗರು ಹೆಮ್ಮೆಪಡತಕ್ಕ ವಿಷಯವಲ್ಲವೆ!

ಆತ್ಮಸಾಕ್ಷಾತ್ಕಾರದ ಪಥವು, ಆತ್ಮವಿದ್ಯಾತತ್ವ ಗಳು ಈ ವಚನಗಳಲ್ಲಿ ಥಳಥಳಿಸುತ್ತವೆ: "ಮರದೊಳ ಗಣ ಮಂದಾಗ್ನಿಯ ಉರಿಯದಂತಿರಿಸಿದೆ, ನೊರೆವಾ ಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ, ಶರೀರ ದೊಳಗಾತ್ಮನ ಕಾಣದಂತಿರಿಸಿದೆ, ನೀ ಬೆರಸುವ ಭೇದಕ್ಕೆ ಬೆರಗಾದೆನೈ ರಾಮನಾಥಾ."

"ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದ ದೊಳಗಣ ನಿಶ್ಶಬ್ದದಂತೆ, ಗುಹೇಶ್ವರಾ ನಿಮ್ಮ ಶರಣ ಸಂಬಂಧ."

"ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯ ಲಡಗಿರ್ದ ಮಿಂಚಿನಂತೆ, ಬಯಲ ಮರೆಯಲಡಗಿರ್ದ ಮರೀಚನಂತೆ, ಕಂಗಳ ಮರೆಯಲಡಗಿರ್ದ ಬೆಳಕಿನಂತೆ, ಗುಹೇಶ್ವರಾ ನಿಮ್ಮ ನಿಲವು."

"ಕಲ್ಲ ದೇವರು ದೇವರಲ್ಲ, ಮಣ್ಣ ದೇವರು ದೇವರಲ್ಲ, ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ, ಸೇತು, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದಲಾದ ಅಷ್ಟಾ ಷಷ್ಟಿ ಕೋಟಿ ಪುಣ್ಯತೀರ್ಥಂಗಳಲ್ಲಿ ಇಹ ದೇವರು ದೇವರಲ್ಲ, ತನ್ನ ತಾನರಿದು ತಾನಾರೆಂದು ತಿಳಿದೊಡೆ ತಾನೆ ದೇವ ನೋಡ."

ವಚನಗಳಲ್ಲಿ ಕನ್ನಡ ನುಡಿಯ ತೇಜವು, ನಾವೀನ್ಯವು ಮಿನುಗುತ್ತಿವೆ. ವಚನಗಳಲ್ಲಿ ತತ್ವ ರತ್ನ ಗಳು ಥಳಥಳಿಸುತ್ತವೆ. ಸಾಧುವೃತ್ತಿಯ ಸೊನೆಯು ಸುರಿಯುತ್ತಿದೆ. ವಚನಗಳು ಲೋಕ ಕಲ್ಯಾಣಗೋಸುಗ ಕನ್ನಡಿಗರು ತಮ್ಮ ವಿಶ್ವವಾಣಿಯಿಂದ ಹಾಡಿದ ಗೀತಾಂಜಲಿ. ವಚನಗಳಲ್ಲಿ ಅನುಭವದ ಅಚ್ಚು ಅಚಲ ವಾಗಿದೆ. ಆಚಾರದ ಕೆಚ್ಚು ಕಂಗೊಳಿಸುತ್ತಿದೆ. ವಚನ ಗಳು ಸಾಹಿತಿಗಳಿಗೆ ಸಾಹಿತ್ಯ, ನೀತಿ ಧರ್ಮ ಶಾಸ್ತ್ರಜ್ಞ ರಿಗೆ ನೀತಿಶಾಸ್ತ್ರ, ಅನುಭವಿಗಳಿಗೆ ಆತ್ಮ ವಿದ್ಯಾದರ್ಪಣ.

ಈ ಮಹಾ ವಚನಗಳಿಗಿಂತ ಹೆಚ್ಚಿನ ಧರ್ಮ, ನೀತಿ, ಸತ್ಯ, ವಿಶ್ವಪ್ರೇಮ ಸಂದೇಶ ಮತ್ತಿನ್ನೆಲ್ಲಿಹುದು?

"ದಯವೇ ಧರ್ಮದ ಮೂಲವಯ್ಯಾ, ದಯವೇ ಬೇಕು ಸಕಲ ಪ್ರಾಣಿಗಳಲ್ಲಿ."

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗಮ ದೇವನೊಲಿಸುವ ಪರಿ."

"ಆಚಾರವೆ ಸ್ವರ್ಗ, ಅನಾಚಾರವೆ ನರಕ."

"ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಶಿವ ಶರಣರೆ ಕುಲಜರು."

"ಸರ್ವ ಜೀವ ದಯಾಪಾರಿಯಾದರೆ ಕೂಡಲ ಸಂಗಮ ದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳ ದಿಪ್ಪನೆ."

ಭೋಗಿಶೆಟ್ಟಿ ಜೂಗಪ್ಪ, ಎಂ.ಎ.

# ರುದ್ರಭಟ್ಟನ ಜಗನ್ನಾಥ ವಿಜಯ

ಶ್ರೀ ಜಗನ್ನಾಥವಿಜಯವು ಕನ್ನಡ ಸಾಹಿತ್ಯದಲ್ಲಿ ಮೊದಲನೆಯ (ಬ್ರಾಹ್ಮಣ ಕವಿ ವಿರಚಿತವಾದ) ವೈದಿಕ ಪುರಾಣ ಚಂಪೂಕಾವ್ಯ. ಇದರಲ್ಲಿ ಶ್ರೀ ಕೃಷ್ಣನ ಜನನ ಮೊದಲ್ಗೊಂಡು ಬಾಣಾಸುರನ ಯುದ್ಧದವರೆಗಿನ ವಿಷ್ಣು ಪುರಾಣದ ಆರನೆಯ ಅಂಶದ ಕಥೆ ಹೇಳಿದೆ. ಇದು 'ಸಮಸ್ತ ಕಮಲಭವಾಂಡಮೂಲಾಘಟೀ ಘಟಿತಾರಘಟ್ಟ ಘಟಿತಾ ಸ್ವತಂತ್ರನಿಜಸ್ವರೂಪ ನಿರೂಪಣಚಕಿತ ಸಕಳಾ ಮ್ನಾಯತಂತ್ರ ಲಕ್ಷ್ಮೀಕಾಂತ ಶ್ರೀಪಾದಭಕ್ತಿಯುತ ಸುಕವೀಂದ್ರ ರುದ್ರ' ಪ್ರಣೀತವಾದುದು; ರುದ್ರಭಟ್ಟನು ಇದರ ಕವಿ. ಈತನು ಬ್ರಾಹ್ಮಣ ಕವಿ. ಇವನಿಗೆ 'ಕೃತಿ ಶಾರದಾಭ್ರ ಚಂದ್ರಾತಪ', 'ಕವಿರಾಜರಾಜ' ಎಂಬ ಬಿರುದುಗಳಿದ್ದಂತೆ ತೋರುತ್ತದೆ. ಈ ಕವಿ ಕಾವ್ಯಸಂಗತಿಯಲ್ಲಿನ ಕೆಲವು ವಿಶೇಷ ಸಂಗತಿಗಳನ್ನು ವಿಚಾರಮಾಡುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಸುಮಾರು ಕ್ರಿ. ಶ. ೯ ರಿಂದ ೧೨ನೆಯ ಶತಮಾನದವರೆಗೆ ದೊರಕುವ ಕಾವ್ಯಶಾಸ್ತ್ರ ಗ್ರಂಥಗಳು ವಿಶೇಷವಾಗಿ ಜೈನ ಕವಿಗಳಿಂದ ರಚಿತವಾದುವು. ಕ್ರಿ. ಶ. ೧೨ ರಿಂದ ೧೫ ರವರೆಗೆ ವೀರಶೈವ ಕವಿಗಳು ಕನ್ನಡ ಸಾಹಿತ್ಯವನ್ನು ವೃದ್ಧಿಗೊಳಿಸಿದರು; ಅಲ್ಲಿಂದ ಮುಂದೆ ಬ್ರಾಹ್ಮಣ ಕವಿಗಳು ಕನ್ನಡ ಸಾಹಿತ್ಯ ಸೇವೆಯನ್ನು ನಡಸಿದರು; ಎಂದು ಹೇಳುವುದು ಸಾಮಾನ್ಯ ಪದ್ಧತಿ. ಇದರಿಂದ ಬ್ರಾಹ್ಮಣ ಕವಿಗಳು ಕ್ರಿ. ಶ. ೯ ರಿಂದ ೧೫ ನೆಯ ಶತಮಾನದವರೆಗೆ ಇರಲಿಲ್ಲವೆಂದು ಅಭಿಪ್ರಾಯವಲ್ಲ; ಹೆಚ್ಚು ಮಂದಿ ಕವಿಗಳು ಕಾಣಬರುವುದಿಲ್ಲ ಅಷ್ಟೆ. ಬ್ರಾಹ್ಮಣಮತ ಪ್ರಚಾರಕ (ವೈದಿಕಮತ ವೈಶಿಷ್ಟ್ಯವುಳ್ಳ) ಗ್ರಂಥಗಳು ಕನ್ನಡದಲ್ಲಿ ವಿರಚಿತವಾಗಿರುವುದು ಅಧಿಕಪ್ರಮಾಣದಲ್ಲಿಲ್ಲವೆನ್ನಬೇಕಾವುದು. ಆದರೇನು! ಮೊದಲನೆಯ ನಾಗವರ್ಮ (ಕ್ರಿ. ಶ. ೯೯೦), ಚಂದ್ರರಾಜ (೧೦೭೯), ಚಾವುಂಡರಾಯ (೧೦೪೦) ಇತ್ಯಾದಿ ಬ್ರಾಹ್ಮಣ ಕವಿಗಳು ಕ್ರಿ. ಶ. ೯ ನೆಯ ಶತಮಾನದಿಂದ ೧೨ ನೆಯ ಶತಮಾನದವರೆಗೆ ಛಂದೋಂಬುಧಿ, ಮದನತಿಲಕ, ಲೋಕೋಪಕಾರ, ಪಂಚತಂತ್ರ ಮೊದಲಾದ ಗ್ರಂಥಗಳನ್ನು ರಚಿಸಿರುವರು. ಇವು ಛಂದಸ್ಸು, ಮದನಶಾಸ್ತ್ರ, ನೀತಿ, ವೈರಾಗ್ಯ ಬೋಧಕ, (ಸಾಮಾನ್ಯ ಕಥೆ) ಕಾವ್ಯ ಮೊದಲಾದ ವಿಷಯಗಳಿಂದ ಕೂಡಿದುವು; ಈ ಕಾಲದಲ್ಲಿ ಜೈನ ಕವಿಗಳೂ, ವೀರಶೈವ ಕವಿಗಳೂ ಮುಂದುವರಿದು ತಮ್ಮ ತಮ್ಮ ಮತ ಸಂಬಂಧವಾದ ಪುರಾಣ ವಿಷಯಗಳನ್ನು ಕುರಿತು ಸಾಹಿತ್ಯ ಸೃಷ್ಟಿಮಾಡಿರುವಂತೆ ಬ್ರಾಹ್ಮಣ ಕವಿಗಳು ತಮ್ಮ ಪೌರಾಣಿಕ ಸಂಗತಿಯನ್ನು ಕುರಿತು ಯಾವ ಗ್ರಂಥವನ್ನೂ ರಚಿಸಿದಂತೆ ತಿಳಿದುಬರುವುದಿಲ್ಲ. ಈ ಸಂದರ್ಭದಲ್ಲಿ—ಜೈನ ವೀರಶೈವ ಮತ ಪ್ರಾಬಲ್ಯಕಾಲದಲ್ಲಿ–ರುದ್ರಭಟ್ಟನು (ವೈದಿಕ) ಪುರಾಣ ಕಾವ್ಯ ರಚಿಸಿರುವನು. (ವೈದಿಕ) ಪುರಾಣ ಕಾವ್ಯವನ್ನು ಕನ್ನಡದಲ್ಲಿ ರಚಿಸಿದ ಮೊದಲನೆಯ ಕವಿ ಈತನು; ಈ ಬ್ರಾಹ್ಮಣ ಕವಿ ಕ್ರಿ. ಶ. ೧೧೮೦ ರಲ್ಲಿ ಇದ್ದನೆಂದು ವಿಮರ್ಶಕರಿಂದ ನಿರ್ಧರಿಸಲ್ಪಟ್ಟಿರುವುದು.

ರದ್ರಭಟ್ಟನು ಕರ್ಣಪಾರ್ಯನನ್ನು (೧೧೪೦ ಕ್ರಿ. ಶ.) ಸ್ತುತಿಸಿರುವುದರಿಂದಲೂ, ದೇವಕವಿಯಿಂದ (ಕ್ರಿ. ಶ. ೧೨೦೦) ಸ್ತುತ್ಯನಾಗಿರುವುದರಿಂದಲೂ ಕ್ರಿ. ಶ. ೧೧೪೦ ರಿಂದ ೧೨೦೦ ರೊಳಗೆ ಎಂದರೆ ಕ್ರಿ. ಶ. ೧೨ ನೆಯ ಶತಮಾನದ ಅಂತ್ಯಭಾಗದಲ್ಲಿ ಇದ್ದಿರಬೇಕು. ಈತನು 'ಚಂದ್ರಮೌಳಿ ಪ್ರಮುಖವಿದ್ವಜ್ಜನಂಮೆಚ್ಚೆ ಪೇಳ್ದೆಂ' ಎಂದು ತನ್ನ ಗ್ರಂಥದಲ್ಲಿ ಹೇಳಿರುವುದೂ, ದೇವತಾಸ್ತೋತ್ರದಲ್ಲಿ 'ಅರಿಕಾಮಧ್ವಂಸಿ', 'ಉಮಾಕಾಮಿತೇಶ', 'ರಾಜಾರಾಜಪ್ರಶಿಕ್ಷಾನಿರತ' ಎಂದು ಶ್ಲೇಷೆಯಿಂದ ತೋರುವ ವ್ಯಂಗ್ಯಮರ್ಯಾದೆಯಿಂದ ತನ್ನ ಆಶ್ರಯದಾತನಾದ ಹೊಯ್ಸಳ ಬಲ್ಲಾಳನನ್ನು ಸ್ತುತಿಸಿರುವುದೂ ಕವಿಯ ಕಾಲವನ್ನು ನಿರ್ಧರಿಸಲು ಅನುಕೂಲವಾದ ವಿಷಯಗಳು. ಶ್ರ. ಬೆ. ೩೨೭ನೆಯ ಶಾಸನದಿಂದಲೂ, ಇತರ ಶಾಸನದಿಂದಲೂ ಕ್ರಿ. ಶ. ೧೧೭೩ ರಿಂದ ೧೨೨೦ ರವರೆಗೆ ಆಳಿದ ಹೊಯ್ಸಳ ವೀರ ಬಲ್ಲಾಳನ ಆಸ್ಥಾನದಲ್ಲಿ 'ಚಂದ್ರಮೌಳಿ' ಎಂಬ ಪ್ರಸಿದ್ಧ ಬ್ರಾಹ್ಮಣ ವಿದ್ವಾಂಸನಿದ್ದನೆಂದು ತಿಳಿದುಬರುವುದು. ಈತನು ಬಲ್ಲಾಳರಾಯನ ದಂಡನಾಥನಾಗಿಯೂ ಇದ್ದನು. ಚಂದ್ರಭಟ್ಟನು ಹೇಳುವ 'ಚಂದ್ರಮೌಳಿ'ಯೂ ಮೇಲಿನವನೇ ಎಂದು

ಹೇಳಲು ಅವಕಾಶವಿರುವುದರಿಂದ ರುದ್ರಭಟ್ಟನು ಕ್ರಿ. ಶ. ೧೧೮೦ ರಲ್ಲಿ ಇದ್ದಿರಬೇಕು. ಈ ಕಾಲವು ಕನ್ನಡ ಸಾಹಿತ್ಯದಲ್ಲಿನ ಪರ್ವಕಾಲ. ಭಕ್ತಿಭಂಡಾರಿ ಬಸವಣ್ಣನವರ ಮುಂದಾಳುತನದಲ್ಲಿ ಆರಂಭವಾದ ವೀರಶೈವ ಮತದ ಹುರುಪು ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯನ್ನು ಉಂಟುಮಾಡಿದೆ. ಆಗಲೇ ಕ್ರಾಂತಿ ಸೂಚಕ ಕನ್ನಡ ವಚನ ಸಾಹಿತ್ಯವೂ, ರಗಳೆ, ಷಟ್ಪದೀ ಕಾವ್ಯರಚನೆಯೂ ಜೈನರ ಚಂಪೂಮಾರ್ಗಕ್ಕಿಂತ ಬೇರೆಯಾಗಿ ಹೊರಟಿದೆ. ಜೈನ ವೀರಶೈವಗಳ ಪಕ್ಷ ವಿಪಕ್ಷಗಳ ತುಮುಲ ಯುದ್ಧದಲ್ಲಿ ಕನ್ನಡ ಸಾಹಿತ್ಯ ಪ್ರವಾಹವು ಸ್ಪರ್ಧಾಯುತವಾದ ಉತ್ಸಾಹದಿಂದ ಪೂರ್ಣವಾಗಿ ಮುಂದುವರಿದಿದೆ. ಈ ಕ್ರಾಂತಿಯ ಕಾಲದಲ್ಲಿ ವೈದಿಕ ಪುರಾಣ (ಬ್ರಾಹ್ಮಣ) ಕವಿಯಾದ ರುದ್ರಭಟ್ಟನನ್ನೂ, ಪ್ರಸಿದ್ಧ ಕನ್ನಡ ಸಾಹಿತ್ಯ ಗ್ರಂಥವಾದ ಜಗನ್ನಾಥವಿಜಯವನ್ನೂ ಕಾಣುವುದು ವಿಶೇಷ ಸಂಗತಿಯೇ ಸರಿ.

ರುದ್ರಭಟ್ಟನು

ಕತೆ ವಿಷ್ಣುಪುರಾಣಂ ಸ
ತ್ಕೃತಿ ಪೇಟ್ದಂ ಸುಕವಿರುದ್ರನೀ ಕೃತಿಗೆ ಕಥಾ ।
ಪತಿ ಕೃಷ್ಣಂ ಕೃತಿಯುಂ ಭೂ
ನುತಮೆ ಜಗನ್ನಾಥವಿಜಯಮೆನೆ ಮೆಚ್ಚದರಾರ್ ॥

ಎಂದು ಸೂಚಿಸಿ ಕತೆ 'ವಿಷ್ಣುಪುರಾಣ', ಕವಿ ಸುಕವಿ ರುದ್ರ, ಕಥಾಪತಿ 'ಕೃಷ್ಣ', ಕಾವ್ಯ 'ಜಗನ್ನಾಥವಿಜಯ' ಎಂಬುದಾಗಿ ಕಥಾವಸ್ತು, ಕವಿ, ಕಾವ್ಯದ ಮುಖ್ಯ ನಾಯಕ, ಕಾವ್ಯ ಸ್ವರೂಪಗಳನ್ನು ಹೇಳಿ ಇದು ಎಲ್ಲರ ಮೆಚ್ಚಿಗೆಗೂ ಪಾತ್ರವಾಗಲೇಬೇಕೆನ್ನುವನು. ಹರ(ರುದ್ರ)ನೇ ಕವಿಯಾಗಿ ಹರಿ (ಕೃಷ್ಣ) ಕಥೆಯು ರಚಿತವಾಗಿ ಜಗನ್ನಾಥವಿಜಯವು ಹರಿಹರೈಕ್ಯತೆಯನ್ನು ಸೂಚಿಸುವುದು. ಜನರ ಮೆಚ್ಚುಗೆಗೆ ಪಾತ್ರವಾಗಿಯೂ ಇರುವುದು. ಕವಿಯು ತನ್ನ ಮತವನ್ನು ಈ ಕಾವ್ಯದಲ್ಲೇ ಅಲ್ಲಲ್ಲಿ ಸೂಚಿಸುತ್ತಲೇ ಇರುವನು. ವಿಷ್ಣುಸ್ತುತಿರೂಪನಾದ ಬೃಹಸ್ಪತಿಯು ನುಡಿವ 'ಪಾವಕನೇತ್ರನಾಗಿ ತಮದಿಂ ರಜದಿಂದಜನಾಗಿ ಸತ್ವದಿಂ ಶ್ರೀವರನಾಗಿ ತೋರುವ ಗುಣತ್ರಯಧಾಮ'

ಎಂಬ ಸಂಗತಿಯೂ, ಬಾಲಕೃಷ್ಣ ವರ್ಣನಾರೂಪವಾದ

ನೊಸಲೊಳ್ ಕಣ್ಣುಳ್ಳ ಮನೋ
ಜ ಸೂದನಂ ಪೆರನದಾವನಾನೆ ದಲೆಂದೀ ।
ವಸುಮತಿಗೆ ಸೂಚಿಪಂದದಿ
ನೆಸೆದಂ ಹರಿ ಕಣ್ಣೊಲೆಸೆವರಲೆಯಿಂ ॥

ಎಂಬ ವಿಷಯವೂ, ಇದರಂತೆ ಮಧ್ಯೆ ಬರುವ ಇಂದ್ರನು ಮಾಡುವ ಕೃಷ್ಣಸ್ತೋತ್ರಾದಿಗಳೂ ಹರಿಹರ ಅಭೇಧ ಜ್ಞಾನವನ್ನು ಸೂಚಿಸಿ ಅದ್ವೈತಮತವನ್ನು ಬೋಧಿಸುವುವು. ಇದರಿಂದ ರುದ್ರಭಟ್ಟನು ಅದ್ವೈತಿಯಾದ ಸ್ಮಾರ್ತ ಬ್ರಾಹ್ಮಣನೆಂದೂ, ವಿಷ್ಣು ಭಕ್ತನೆಂದೂ ನಿರ್ಧರಿಸಬೇಕಾಗುವುದು.

ರುದ್ರಭಟ್ಟನು ಕಾವ್ಯಾರಂಭದಲ್ಲಿ ಶ್ರೀ ಕೃಷ್ಣನೇ ಮೊದಲಾಗಿ ದೇವವೇವಿಯರನ್ನು ಸ್ತುತಿಸಿದಮೇಲೆ ವಾಲ್ಮೀಕಿ, ವ್ಯಾಸ, ಬಾಣಾದಿ ಸಂಸ್ಕೃತ ಮಹಾ ಕವಿಗಳನ್ನು ಸ್ತುತಿಸುವನು. ಬಳಿಕ ಪೂರ್ವ ಕನ್ನಡ ಕವಿಗಳನ್ನು ಕುರಿತು:

ಇನಿತುಮಿವರ್ಕೆ ಮತ್ಕೃತಿಯೊಳೀ
ಧರೆ ಬಣ್ಣಿಸೆ ಸಂದ ಶಂಖವ ।
ರ್ಮನ ಬಗೆ, ಶಾಂತಿವರ್ಮನ ನಯಂ,
ಗುಣವರ್ಮನ ಬಂಧಗೌರವಂ ।
ಮನಸಿಜನೋಜೆ, ಕಣ್ಣಪನ ಜಾಣ್ನುಡಿ,
ಪಂಪನ ರೀತಿ ಚಂದ್ರಭ ।
ಟ್ಟನ ಜತಿ, ಪೊನ್ನಮಯ್ಯನ ಬೆಡಂಗ
ಗಜಾಂಕುಶನುಳ್ಳ ಬಿನ್ನಣಂ ॥

ಎಂದು ಸ್ತುತಿಸುವ ಸಂದರ್ಭದಲಿ ಅವರ ಕಾವ್ಯದ ಗುಣ ತನ್ನ ಕಾವ್ಯಕ್ಕೆ ಬರಬೇಕೆನ್ನುವನು; ಇದರಿಂದ ತನ್ನ ಕಾವ್ಯವು 'ಅನವದ್ಯಂ, ರೀತಿ ಚೋದ್ಯಂ ಸಕಲ ವಿಬುಧ ಹೃದ್ಯಂ' ಆಗುವುದೆಂದೂ,

ಇನಿಯಳ ಸೋಂಕಿನಂತೆ ಪೊಸಮಾವಿನ
ಪೂವಿನ ಜೊಂಪದಂತೆ ಚಂ
ದನರಸದಣ್ಪಿನಂತೆ ನನೆಯೇರಿದ ಮಲ್ಲಿಗೆ
ಯಂತೆ ಪೂರ್ಣ ಚಂ ।
ದ್ರನ ಸಿರಿಯಂತೆ, ಬಂದೆಸೆಪ ತೆಂಕಣ
ತೆಂಬೆಲರಂತೆ ರುದ್ರ ಭ
ಟ್ಟನ ಕವಿತಾರಸಂ ಮನಮನಿರ್ಕುಳಿ
ಗೊಳ್ವುದು ಸಜ್ಜನರ್ಕಳಾ ॥

ಎಂದು ತನ್ನ ಕವಿತಾ ಚಾತುರ್ಯವನ್ನೂ ಹೇಳಿಕೊಂಡಿರುವನು. ಪ್ರಬಲರಾದ ಜೈನ ವೀರಶೈವ ಕವಿಗಳ ಮಧ್ಯೆ ಏಕಾಂಗಿ ಬ್ರಾಹ್ಮಣ (ಪುರಾಣ) ಕವಿಯಾಗಿ ನಿಂತು ದಿಟ್ಟತನದಿಂದ ಈ ರೀತಿ ನುಡಿಯಬೇಕಾದರೆ ಕವಿಯು ಸಮರ್ಥನೇ ಆಗಿರಬೇಕು; ಈ ಕಾವ್ಯವು ವಾಸ್ತವವಾಗಿ ಉತ್ತಮವಾಗಿಯೇ ಇರಬೇಕು. ಕನ್ನಡ ಸಾಹಿತ್ಯವು ಉಚ್ಛ್ರಾಯ ಸ್ಥಿತಿಯಲ್ಲಿ, ಜೈನ ವೀರಶೈವರಲ್ಲಿನ ಸ್ಪರ್ಧೆಯಿಂದ ರಸಪೂರ್ಣವಾಗಿ, ವೇಗವಾಗಿ ಮುಂದುವರಿಯುವ ಕಾಲದಲ್ಲೇ ರುದ್ರಭಟ್ಟನ ಕವಿತಾರಸವು ಅದರೊಡನೆ ಬೆರೆತು ಸಾಗುವ ಸಂಗತಿ ಇಲ್ಲಿ ಕಾಣಬರುವುದು.

ರುದ್ರಭಟ್ಟನು ಬ್ರಾಹ್ಮಣ ಕವಿ. ತನ್ನ ಗ್ರಂಥದಲ್ಲಿ ವಾಲ್ಮೀಕಿ, ವ್ಯಾಸಾದಿ ಸಂಸ್ಕೃತ ಕವಿಗಳನ್ನು ಹೊಗಳಿರುವುದರಿಂದ ಈತನು ಸಂಸ್ಕೃತಾಭಿಮಾನಿಯೂ, ಸಂಸ್ಕೃತ ಪಂಡಿತನೂ ಆಗಿರಬೇಕು. ತನ್ನ ಕವಿಗಳನ್ನು ಸ್ತುತಿಸುವ ಸಂದರ್ಭದಲ್ಲಿ ಪ್ರಸಿದ್ಧ ವೀರಶೈವ ಕವಿಗಳನ್ನು ಸ್ತುತಿಸದೆ ಜೈನ ಕವಿಗಳನ್ನು ಮಾತ್ರ ಹೊಗಳಿರುವುದೂ ಈತನಿಗೆ ಆಗಿನ ಹೊಸ ಮಾರ್ಗದಲ್ಲಿ ಪ್ರವೃತ್ತಿಯಿರಲಿಲ್ಲವೆಂಬುದನ್ನು ಸೂಚಿಸುವುದು; ಸಂಸ್ಕೃತ ಚಂಪೂಮಾರ್ಗಾನುವೃತ್ತಿಗಳಾದ ಜೈನರಲ್ಲಿಯೂ, ಸಂಸ್ಕೃತದಲ್ಲಿಯೂ ಕವಿಗೆ ವಿಶೇಷಾಭಿಮಾನವಿತ್ತೆಂಬುದನ್ನೂ ತಿಳಿಸುವುದು. ಅಷ್ಟೇ ಅಲ್ಲ; ರುದ್ರಭಟ್ಟನು ತನ್ನ ಗ್ರಂಥವನ್ನು ಜೈನ ಮಾರ್ಗದಲ್ಲೆ ರಚಿಸಿರುವನು. ಕೆಲವು ಸಂದರ್ಭದಲ್ಲಿ ತನ್ನ (ವೈದಿಕ) ಪುರಾಣ ಕಾವ್ಯದಲ್ಲಿ ಜೈನ ಪ್ರಕ್ರಿಯೆಗಳನ್ನು ಸೇರಿಸಿರುವುದು ಇದಕ್ಕೆ ಆಧಾರವಲ್ಲದೆ ರುದ್ರಭಟ್ಟನ ಕಾವ್ಯದಲ್ಲಿ ಕಾಣುವ ಕೆಲವು ವಿಶೇಷ ಸಂಗತಿಗಳಲ್ಲಿ ವೈದಿಕಮಾರ್ಗದ ಮಧ್ಯೆ ಜೈನ ಪ್ರಕ್ರಿಯೆ ಅಡಗಿರುವುದೂ ಒಂದು ಅಸಾಧಾರಣ ಸನ್ನಿವೇಶವೇ ಸರಿ! ರುದ್ರಭಟ್ಟನು ಜಗನ್ನಾಥ ವಿಜಯದಲ್ಲಿ ಬಲರಾಮನ ವಿಚಾರ ನುಡಿಯುತ್ತಾ,

> ಕಾಲಧ್ವಜಂಗೆ ದಿವ್ಯ ವಿ
> ನೀಲಾಂಬರಮೇಕ ಕುಂಡಲಂ ಬಂದಪುದಾ।
> ಶೈಲಾಗದೊಳಂತವಱಿಂ
> ನೀಲಾಂಬರನೇಕ ಕುಂಡಲಂ ತಾನಕ್ಕುಂ ॥

ಎಂದು ಬಲರಾಮನನ್ನು ಏಕಕುಂಡಲನೆಂದು ಕರೆಯುವನು. ಏಕಕುಂಡಲನೆಂದು ಬಲರಾಮನಿಗೆ ನುಡಿಯುವುದು ಜೈನ ಪ್ರಕ್ರಿಯೂ ಮಾರ್ಗವೇ ವಿನಾ ವೈದಿಕ ಪುರಾಣದಲ್ಲಿ ಇದೆಲ್ಲಿಯೂ ಕಾಣಬರುವುದಿಲ್ಲ. ಅಷ್ಟೇ ಅಲ್ಲ! ಮತ್ತೊಂದು ಸಂಗತಿ ವಿಮರ್ಶೆ ಮಾಡೋಣ! ಕೃಷ್ಣನು ಹುಟ್ಟುವುದಕ್ಕೆ ಮೊದಲು 'ದೇವಕಿಯು ವಸುದೇವನೊಡನೆ ಪವಡಿಸಿದರ್ದು ಯಾಮಿನೀಯಾಮತ್ರಯದೊಳ್:

> ದ್ಯುತಿ ಧೌತವ್ಯೋಮ ಚಂಡಾಂಶುವನಮಲ
> ಸೂತಿಯಂ ದರ್ಪದೈರಾ
> ವತಮಂ ಪ್ರೋದ್ದಾಮಹೇಮಾಚಲಮ
> ನಭಿತಾಂಭೋಜಮಂ ತ್ವಂಗದುತ್ತುಂ।
> ಗ ತರಂಗಾಂಭೋಧಿಯಂ ಸತ್ಫಲಕಳಿತ
> ಸುರೋರ್ವೀಜಮಂ ಶೈಲ ಶೃಂಗ
> ಸ್ಥಿತ ಗರ್ಜತ್ಸಿಂಹಮಂ ಸ್ವಪ್ನದೊಳತಿಮುದದಿ
> ದೇವಕೀ ದೇವಿ ಕಂಡಳಾಗಳ್ ॥'

ಎಂದು ರುದ್ರಭಟ್ಟನು ಸ್ವಪ್ನ ವೃತ್ತಾಂತವನ್ನು ಸೂಚಿಸಿರುವನು. ಇದು ವೈದಿಕ ಪುರಾಣದಲ್ಲಿ ಕಂಡುಬರುವುದಿಲ್ಲ. ಈ ಸ್ವಪ್ನ ಸೂಚನೆಯು ಜೈನ ಸಂಪ್ರದಾಯದಲ್ಲುಂಟು. ಕರ್ಣಪಾರ್ಯನು ನೇಮಿನಾಥ ಪುರಾಣದಲ್ಲಿ ಕೃಷ್ಣ ಜನನಕ್ಕೆ ಮೊದಲು ದೇವಕೀದೇವಿಯು ನಿಜಮನೋವಲ್ಲಭನೊಡನೆ ಸುಖಸುಪ್ತಿಯಂ ತಳೆದು ಬೆಳಗಪ್ಪ ಜಾವದೊಳ್

> ಗಜ ವೈರಿಯನುನ್ನತ ಸಾ
> ಮಜ ರಾಜನನಂತ ಪುಷ್ಪದಂತರುಮಂ ನೀ।
> ರಜ ವಾಸಿನಿಯುಮನಹಿತ
> ವ್ರಜ ಭಂಜನಮಪ್ಪ ಚಕ್ರಮೆಂಬವನಾಗಳ್ ॥

"ಭೋಂಕನೆ ಕಂಡೆಳ್ದು" ಎಂದು ಸ್ವಪ್ನ ವೃತ್ತಾಂತವನ್ನು ತಿಳಿಸಿರುವನು. ರುದ್ರಭಟ್ಟನು ಇದೇ ಮಾರ್ಗವನ್ನನುಸರಿಸಿದಂತಿದೆ. ಈತನಿಗೆ ಜೈನ ಕವಿ ಕಾವ್ಯಗಳ ಪರಿಚಯವು ಪೂರ್ಣವಾಗಿರಬೇಕು. ಅದರಿಂದ ಆ ರೀತಿ ನೀತಿಗಳು ಈತನ ಪುರಾಣ ಕಾವ್ಯದಲ್ಲಿ ತಾನಾಗಿ ಸೇರಿ ಹೋಗಿರಬೇಕು. ಕವಿಯು ತಾನೇ ಪೂರ್ವ ಜೈನ ಕವಿಗಳ ಭಾವವನ್ನು ತೆಗೆದುಕೊಂಡು ಹೊಸ ಬಗೆಯಲ್ಲಿ ಹೇಳಿರುವ ಸಂಗತಿಯೂ ವ್ಯಕ್ತವಾಗಿ ಕಾಣಬರುವುದು. ರುದ್ರಭಟ್ಟನು ವರ್ಷಕಾಲ ವರ್ಣನೆಮಾಡುವ ಸಂದರ್ಭದಲ್ಲಿ (೬ನೆಯ ಆಶ್ವಾಸ ೧೨ನೆಯ ಪದ್ಯ)

ಮಾಕಂದಂ ಬೀತಿರೆ ಜಂ
ಬೂ ಕುಜಫಲದಿಂ ಶುಕಾಳಿಸುಖಿಯಾಯ್ತು ಪಿಕಂ।
ಮೂಕತೆ ವೆತ್ತಿರ್ಪುದಱಿಂ
ದೇಕಗ್ರಾಹಿಗೆ ಸುಖೋದಯಂ ಸಮನಿಪುದೇ ॥

ಎಂದು ಹೇಳುವ ವಿಚಾರವು "ಮಾಕಂದಂ ಫಲಹೀನಮಾದ ಪದದೊಳ್ ಜಂಬೂರಸಾಸ್ವಾದನ." ಎಂಬ ಪಂಪರಾಮಾಯಣದ ವೃತ್ತವನ್ನು ಸಂಗ್ರಹವಾಗಿ ಕಂದ ಪದ್ಯದಲ್ಲಿ ಪರಿಪೂರ್ಣ ಭಾವ ಬರುವಂತೆ ಸೊಗಸಾಗಿ ಚಿತ್ರಿಸಿರುವನು. 'ಫಲಹೀನಮಾದ ಪದದೊಳ್' ಎಂಬುದಕ್ಕೆ ಪ್ರತಿಯಾಗಿ 'ಬೀತು' ಎಂಬ ಚಿಕ್ಕ ಕನ್ನಡ ಪದವನ್ನು ಉಪಯೋಗಿಸಿ, ಪೂರ್ಣಾಭಿಪ್ರಾಯ ಸೂಚಿಸಿರುವ ಸಂಗತಿ ರುದ್ರಭಟ್ಟನ ಕವಿತಾಸಾಮರ್ಥ್ಯವನ್ನು ಸೂಚಿಸುವುದಿಲ್ಲವೇ! ದೇವಕವಿಯು ನುಡಿದಂತೆ 'ರುದ್ರಭಟ್ಟನ ಪದಪ್ರಗಲ್ಭಗುಣವು' ಇಂತಹ ಸಂದರ್ಭಗಳಿಂದ ತೋರಿಬರುವುದೆಂಬುದು ಸ್ಪಷ್ಟವಾದ ಸಂಗತಿಯೇ ಸರಿ. ರುದ್ರಭಟ್ಟನು ಪಂಪರಾಮಾಯಣವನ್ನು ತನ್ನ ಜಗನ್ನಾಥವಿಜಯಕ್ಕೆ ಮಾದರಿಯಾಗಿಟ್ಟುಕೊಂಡಿರಬಹುದಾಗಿದೆ. ಕವಿಯೇ ನುತಿಸುವ ಕವಿಗಳ ಪ್ರಭಾವವೆಲ್ಲವೂ ಈತನ ಕಾವ್ಯರಚನೆಗೆ ಪ್ರೋತ್ಸಾಹಕೊಟ್ಟದ್ದರೂ ಪಂಪರಾಮಾಯಣವು ಈತನ ಮನಸ್ಸನ್ನು ಹೆಚ್ಚು ಆಕರ್ಷಿಸಿದೆಯೆನ್ನಬಹುದು.

ಜಗನ್ನಾಥವಿಜಯವು ಕನ್ನಡದ(ಬ್ರಾಹ್ಮಣ) ಪುರಾಣದ ಪ್ರಥಮ ಕಾವ್ಯ. ಇದರಲ್ಲಿ ಸ್ವಲ್ಪಮಟ್ಟಿಗೆ ವೈದಿಕ ಪುರಾಣ ಲಕ್ಷಣವೂ, ಕಾವ್ಯ ಲಕ್ಷಣವೂ ಅಡಕವಾಗಿರುವುದೂ ಇದು ಪಂಪ, ಪೊನ್ನ ಮೊದಲಾದವರಿಂದ ರಚಿತವಾಗಿರುವ ಆದಿಪುರಾಣವೇ ಮೊದಲಾದ ಗ್ರಂಥಗಳಲ್ಲಿಯೂ ವ್ಯಕ್ತವಾಗಿ ಕಾಣುವುದಲ್ಲವೇ! ಜಗನ್ನಾಥವಿಜಯವು ವಿಷ್ಣುಪುರಾಣದ ಕಥಾಭಾಗವಾದುದರಿಂದ ಪುರಾಣದ ಕೆಲವು ಲಕ್ಷಣಗಳಿರುವುವು. ಇದು ಚಂಪೂ ರೂಪವಾಗಿದೆ. ಇದೊಂದು ಮಹಾಕಾವ್ಯ; ಹದಿನೆಂಟು ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ; ಕೃಷ್ಣಚರಿತವೇ ವಿಸ್ತಾರವಾಗಿ ವರ್ಣಿತವಾಗಿದೆ. ಸಮಯೋಚಿತವಾಗಿ ಮಹಾಕಾವ್ಯದಲ್ಲಿರಬೇಕಾದ ವರ್ಣನೆಯೂ ಕಾಣಬರುವುದು. ಕೃಷ್ಣನ ಜನನ ಮೊದಲ್ಗೊಂಡು ಸಾಲ್ವವಧೆಯವರೆಗೆ ಕಥೆಹೇಳಿದೆ. ಈ ಭಾಗದಲ್ಲಿ ಏಕೋತ್ತರ ಶತ ಕೃತ್ಯಗಳು ವರ್ಣಿತವಾಗಿರುವಂತೆ ತಿಳಿದು ಬರುವುದು.

'ರಸಾತ್ಮಕಂ ಕಾವ್ಯಂ' ಎಂಬಂತೆ ರಸ (ಅಥವಾ ಭಾವ)ವೇ ಉತ್ತಮ ಕಾವ್ಯದ ಜೀವಾಳವೆನ್ನುವುದು ಸರಿ. ಅರ್ಥಾಲಂಕಾರಗಳು ರಸಪುಷ್ಟಿಯನ್ನುಂಟುಮಾಡುವ ಸಂದರ್ಭದಲ್ಲಿ ಕಾವ್ಯಾನಂದ ದೊರೆಯುವುದರಿಂದ ಅವು ಕಾವ್ಯದಲ್ಲಿರಬಹುದೆಂದೂ ಇದರಿಂದ ಮಧ್ಯಮ ಕಾವ್ಯ ಕಾಣಬಹುದೆಂದೂ ಅಭಿಪ್ರಾಯವುಂಟು. ಆದರೆ ರಸಪುಷ್ಟಿಗೆ ಹೆಚ್ಚು ಅವಕಾಶವಿಲ್ಲದ ಶಬ್ದಾಲಂಕಾರಗಳು ಕಾವ್ಯದಲ್ಲಿ ಆವಶ್ಯಕ ಸ್ಥಳ ಹೊಂದಲಾರದೆಂದೂ, ಇದಕ್ಕೆ ಪ್ರಾಶಸ್ತ್ಯವುಳ್ಳ ಕಾವ್ಯವು ಚಿತ್ರಕಾವ್ಯವಾಗುವುದು, ಅದು ಅಧಮ ಕಾವ್ಯವಾಗುವುದೆಂದೂ ಅಭಿಪ್ರಾಯ ಬೆಳೆದು ಬಂದಿದೆ. ಆದರೆ ಉತ್ತಮ ಕವಿಯು ಈ ಶಬ್ದಾಲಂಕಾರಗಳನ್ನೂ ಸಂದರ್ಭಾನುಗುಣವಾಗಿ ಉಪಯೋಗಿಸಿ ಕಾವ್ಯದ ಸೊಬಗನ್ನು ಬೆಳಸಬಲ್ಲನು. ಈ ಸಂಗತಿ ರುದ್ರಭಟ್ಟನಿಗೆ ಅನ್ವಯಿಸುವುದು. ರುದ್ರಭಟ್ಟನು ಜಗನ್ನಾಥ ವಿಜಯದ ಆರಂಭದಲ್ಲಿ 'ಭೂಭಾರಚ್ಛೇದ ವಿನೋದಿ ಕೃಷ್ಣನೆಮಗೀಗಾನಂದ ಸಂದೋಹಮಂ,' 'ರುದ್ರಕೃಷ್ಣಕಥೆ ವೇಟಿನೆ ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ವ ಬೋಧಮುದ್ಯೋತಿಪುದೆಂಬುದಂ ಬಯಸಿಪೇಳ್ದ" ಎಂದೂ, 'ಕೂಡುಗೆ ರುದ್ರಭಟ್ಟಕೃತಿ ವೈಷ್ಣವ ಕಾವ್ಯರಸಾರ್ಣವಂ ತುಳುಂಕಾಡುಗೆ ಭೂಮಿ ನಿಲ್ವಿನಂ' ಎಂದು ವಿಷ್ಣುಭಕ್ತಿ ಪ್ರಾಧಾನ್ಯವಾಗಿ ಈ ಗ್ರಂಥ ರಚಿಸಿರುವನು. ಭಕ್ತಿ ಭಾವವೇ ಈ ಕಾವ್ಯದ ಉದ್ದೇಶ. ಇದಕ್ಕೆ ಭಂಗ ಬಾರದಂತೆ ಅಲ್ಲಲ್ಲೇ ಕವಿಯು ಶಬ್ದಾಲಂಕಾರಗಳನ್ನು ಸಂದರ್ಭೋಚಿತ ಪ್ರಯೋಗಿಸಿ ತನ್ನ ಕವಿತಾಚಾತುರ್ಯ ತೋರಿರುವುದನ್ನು ಎಲ್ಲರೂ ಗಮನಿಸಬೇಕು. ರುದ್ರಭಟ್ಟನಿಗೆ ಅನುಪ್ರಾಸ ಯಮಕಾಲಂಕಾರಗಳನ್ನು ಉಪಯೋಗಿಸುವುದರಲ್ಲಿ ತುಂಬಾ ಉತ್ಸಾಹವಿರುವುದು. ಅದರಲ್ಲೂ ಯಮಕಾಲಂಕಾರವನ್ನು ಅತ್ಯಂತ ಮನೋಹರವಾಗಿ ಉಪಯೋಗಿಸುವುದರಲ್ಲಿ ಸಿದ್ಧಹಸ್ತನು. ಈತನು ಗ್ರಂಥಾದಿಯಲ್ಲೇ ಪೂರ್ವ ಕವಿಗಳನ್ನು ಸ್ಮರಿಸುವಾಗ ಸಂಸ್ಕೃತಕವಿಗಳನ್ನು ಸ್ತುತಿಸುವ ಸಂದರ್ಭದಲ್ಲಿ: 'ಕೃತಪಂಚಮಶ್ರುತಿ ಪುರಾಣವ್ಯಾಸನಂ ವ್ಯಾಸನಂ, ಕವಿತಾಗೀರ್ವಾಣಬಾಣನಂ ಬಾಣನಂ, ಕಾವ್ಯ ಜನಿತೋ ಶ್ರೀಹರ್ಷನಂ ಹರ್ಷನಂ, ಬುಧಸ್ತೋಮ ಮಾಘನಂ

ಮಾಘನಂ'' ಎಂದು ಆರಂಭಿಸಿರುವನು. ಇಲ್ಲಿನ ಯಮ ಕಾಲಂಕಾರವು ಅರ್ಥಪೋಷಣೆಗೆ ಸಹಕಾರಿಯಾಗಿಯೇ ಇರುವುದು, ಹೀಗೆಯೇ 'ಪರುಷತರಸ್ವನೋನ್ಮುಖ ರನಂ ಖರನಂ, ಖರನಂ ಮುರಾರಿ, ಸಂಹರಿಸೆ ಜಯ ಪ್ರಮೋದಸುಮನರ್, ಸುಮನರ್ ಸುಮನಸ್ಸು ವೃಷ್ಟಿಯಂ'' ಇತ್ಯಾದಿ ಯಮಕಾಲಂಕಾರವು ಅಪರಿಮಿತ ವಾಗಿ ಅಲ್ಲಲ್ಲಿ ಬಂದಿದೆ. ಹೀಗೆ ಅಲ್ಲೊಂದು ಇಲ್ಲೊಂದು ಯಮಕಾಲಂಕರವು ಬರುವುದು ಅಷ್ಟು ವಿಶೇಷವಲ್ಲ. ಈ ಕಾವ್ಯದಲ್ಲೇ (ದಶಮಾಶ್ವಾಸದಲ್ಲಿ) ನಾರದನು ಶ್ರೀ ಕೃಷ್ಣನ ಬಳಿಗೆ ಬಂದು ಸತ್ಕೃತನಾಗಿ 'ಸಕಲ ಲಕ್ಷಣೋಪ ಲಕ್ಷಿತಾವಯವಸಂಪನ್ನೆಯಪ್ಪ ಕನ್ನೆಯ ರೂಪವನಾ ಮಸ್ತಕಾಗ್ರಂಬರಂ ಪೇಳ್ವೆನೆಂದು ರುಕ್ಮಿಣಿಯನ್ನು ವರ್ಣಿಸುವನು. ಆಗ,

ಸಲ್ಲದು ಸೆಣಸಲ್ ತಮಗಿದು
ಸಲ್ಲದು ಚೆಲ್ವೆನಿಸಿಗೆಲ್ದು ಸತಿಯಡಿದಳಿರ್ಗಳ್ ।
ಪಲ್ಲವ ಕಮನೀಯತೆಯಂ
ಪಲ್ಲವ ಕಮನಃ ಪ್ರಮೋದಮಂ ಪೆರ್ಚಿಸುಗಂ ॥

ಎಂದು ರುಕ್ಮಿಣೀದೇವಿಯ 'ಅಡಿತಳಿರ್ಗಳ' ವರ್ಣನೆ ಯಿಂದ ಆರಂಭಮಾಡಿಕೊಂಡು ದೇವಿಯ ರೂಪಿನ ಸೊಬಗನ್ನು ಕ್ರಮವಾಗಿ ಮಸ್ತಕಾಗ್ರಂಬರಂ ವಿವರಿಸು ವನು (೧೧ ನೆಯ ಆಶ್ವಾಸ ೧೯ನೆಯ ಪದ್ಯದಿಂದ ೫೮ರ ವರೆಗೆ ೩೦ ಪದ್ಯಗಳಿರುವುವು). ಮಡ, ಉಂಗುಟ, ಮೇಂಗಾಲ್, ಕಿರುದೊಡೆ, ಹೀಗೆ ಕ್ರಮಕ್ರಮವಾಗಿ ಮೇಲು ಮುಖವಾಗಿ ಅವಯುವ ಸೌಷ್ಮವ ಸೌಂದರ್ಯ ಸೌಕುಮಾರ್ಯಗಳನ್ನು ಯಮಕಾಲಂಕಾರ ಪುರಸ್ಸರ ವಾಗಿ ಶೃಂಗಾರರಸ ಪೋಷಕವಾಗುವಂತೆ ವರ್ಣಿಸಿರು ವನು. ಇದರ ಮತ್ತೆರಡು ಉದಾಹರಣೆಗಳನ್ನು ಸೂಚಿಸು ವುದು ಕವಿಯ ವರ್ಣನಾಪ್ರತಿಭೆ ಮತ್ತು ರಸಪ್ರತಿಪಾದನ ಶಕ್ತಿ ಇವನ್ನು ತೋರಿಸುವುದಕ್ಕಾಗಿ:

ತಾಮರಸಮುಖಿಯ ನಳಿತೋಳ್
ತಾಮರಸಬೆಡಂಗುವೆತ್ತು ಸಿರಿಸದಸುಮನೋ ।
ದಾಮಕಮಂ ಗೆಲೆವಂದೆಸೆ
ದಾ ಮಕರಧ್ವಜನ ಪಾಶಮೆನೆ ಸೊಗಯಿಸುಗುಂ ॥
(ತೋಳಿನ ವರ್ಣನೆ)

ರಾಜಿಪ ಮುಖಲಕ್ಷ್ಮಿಗೆ ನೀ
ರಾಜಿಪ ಮಣಿಪಾತ್ರಯುಗಳಮೆನೆ ಸೊಗಯಿಸುಗುಂ।
ರಾಜೀವ ಮುಖಿಯ ಮಣಿರುಚಿ
ರಾಜೀವಳಿತಾವತಂಸ ಕರ್ಣಯುಗಂಗಳ್ ॥
(ಅವತಂಸ ವರ್ಣನೆ)

ವಳಯದ ನೂಪುರದುಲಿ ಭೂ
ವಳಯದ ಕಿವಿಗಮರ್ದುಗಜಿಯಲತನುಗೆವಿಟರೊಳ್
ಕಳಹಂ ಸಮನಿಸೆ ಚೆಲ್ವಿಂ
ಕಳಹಂಸಮನಿಟುಪುದಲಸಗತಿ ರುಕ್ಮಿಣಿಯಾ ॥
(ಅಲಸಗತಿ ವರ್ಣನೆ)

ಇವುಗಳಲ್ಲೆಲ್ಲಾ ಕವಿಯು ತನ್ನ ಚಾತುರ್ಯವನ್ನು ವಿಷಯಪರಿಜ್ಞಾನವನ್ನೂ ಸೂಚಿಸಿರುವನು. ಈ ಯಮಕ ಗಳು ಶೃಂಗಾರ ರಸಪೋಷಕವಾಗಿ ಕಾವ್ಯಕ್ಕೆ ಕಳೆಕೊಡ ತಕ್ಕುವಾಗಿವೆ. ಇದು ರುದ್ರಭಟ್ಟನಲ್ಲಿ ಕಾಣಬರುವ ಒಂದು ವಿಶೇಷ ಗುಣ. ಯಮಕಾಲಂಕಾರಪ್ರಿಯನಾದ ಕವಿಯು ಹೇಗೆ ಶಬ್ದಾಲಂಕಾರವನ್ನು ಕಾವ್ಯರಸಪರಿಪೋ ಷಣೆಗೆ ಉಪಯೋಗಿಸಬಹುದೆಂಬುದನ್ನು ತೋರಿಕೊಟ್ಟಿರು ವನು. ಈತನು ಉತ್ತಮ ಕವಿಯೆಂಬುದು ಇದರಿಂದ ಚೆನ್ನಾಗಿ ವ್ಯಕ್ತವಾಗುವುದಷ್ಟೆ! ಶಬ್ದಾಲಂಕಾರವನ್ನೇ ಈ ರೀತಿ ಕಾವ್ಯ ಶ್ರೀ ಸೊಬಗನ್ನು ಹೆಚ್ಚಿಸಿ ಕಾವ್ಯಾನಂದ ದಾಯಿ ರಸವಿಶೇಷವನ್ನು ಉಂಟುಮಾಡಲು ಉಪಯೋ ಗಿಸಬಲ್ಲನೆಂದ ಮೇಲೆ ಈತನು ಅರ್ಥಾಲಂಕಾರಗಳನ್ನೂ ಉತ್ತಮ ರೀತಿಯಲ್ಲಿ ಕಾವ್ಯಾನಂದ ಹೆಚ್ಚಿಸಲು ಉಪ ಯೋಗಿಸಿರುವನೆಂಬುದು ಆಶ್ಚರ್ಯದ ವಿಷಯವಲ್ಲ. ಈ ಚಿಕ್ಕ ಪ್ರಬಂಧದಲ್ಲಿ ಅದರ ವಿವರಣೆಗೆ ಅವಕಾಶ ಕಡಮೆಯಾಗಿದೆ. 'ಸತ್ತು ಕಾಣ್ಬ ಸ್ವರ್ಗದಿಂದಿರ್ದು ಕಾಣ್ಬ ನರಕಮೇ ಲೇಸು,' 'ಪಾವಡರ್ದಪಂದೆ,' 'ಮಾಳತಿಗೆರಗಿದ ದುಂಬಿ ನೆಗೆಗುಮೇ ಮಿಕ್ಕಲರಂ,' 'ಕಡಲಪೀರ್ವಂಗಮರಿದೆ ಕುಡಿತೆಯ ಸಲಿಲಂ,' 'ಪರಿ ಗೋಲನಿಂತು ಕೊಯ್ವುದೇ ನಡುನೀರೊಳ್, 'ಮಳೆ ಗಂಜದೊಡಂ ಪುಲಿಗಂಜುವಂತೆವೊಲ್,' ಇತ್ಯಾದಿ ಅಲಂಕಾರ ವಾಕ್ಯಗಳು ಹೇಗೆ ನಾಳ್ನುಡಿಯಾಗಿ ಉಪ ಯೋಗವಾಗಬಹುದೆಂದು ಗಮನಿಸಲರ್ಹವಾದುದಲ್ಲವೇ!

ಜಗನ್ನಾಥ ವಿಜಯದಲ್ಲಿ 'ವಿಷ್ಣು ಭಕ್ತಿ'ಗೆ ಪ್ರಾಧಾನ್ಯತೆ ಯಿರುವುದು ಸರಿಯಷ್ಟೆ. ಭಕ್ತಿಭಾವವು ಇಲ್ಲಿ ಮುಖ್ಯ

ವಾಗಿದೆ. ದಶಾವತಾರ ಸ್ತೋತ್ರ, ಇಂದ್ರನೇ ಮೊದಲಾಗಿ ಎಲ್ಲರೂ ಸಂದರ್ಭಾನುಸಾರ ಮಾಡುವ ವಿಷ್ಣುವಿನ ಸ್ತುತಿ, ಕೃಷ್ಣನ ಸ್ತೋತ್ರಗಳು ಇದನ್ನು ಸ್ಥಿರಪಡಿಸುವುವು. ಈ ಭಕ್ತಿಭಾವಕ್ಕೆ ಅಂಗವಾಗಿ ಶೃಂಗಾರ, ವೀರ, ಕರುಣಾ, ಹಾಸ್ಯಾದಿ ರಸಗಳೂ ಅಲ್ಲಲ್ಲೇ ಈ ಕಾವ್ಯದಲ್ಲಿ ಕಾಣಬರುವುವು. ದಿಗ್ದರ್ಶನಾರ್ಥವಾಗಿ ಕೆಲವನ್ನು ಸೂಚಿಸಬಹುದು :

ಬಲರಾಮನು ತಾಯಿಯೊಡನೆ ಕೃಷ್ಣನು ಮಣ್ಣು ತಿಂದನೆಂದು ಚಾಡಿ ಹೇಳಿದ ಮಾತನ್ನು ನಂಬಿ ಯಶೋದೆಯು ಕೃಷ್ಣನ ಬಾಯನ್ನು ಪರೀಕ್ಷಿಸುವ ಸಂದರ್ಭದಲ್ಲಿ 'ವಾರ್ಧಿಯೇಟುಂ ಕುಲೋರ್ವೀಧರವೇಟುಂ, ದ್ವೀಪವೇಟುಂಬೆರಸು ಜಗಮನೀರೇಳುಲೋಕಮಂ ಕಂಡು' ವಿಭ್ರಾಂತಿಯಾದಳ್ ಎಂಬಲ್ಲಿ ಅದ್ಭುತ ರಸವಿರುವುದು. ಯಶೋದೆಯು ಕೃಷ್ಣನು ಹಾಲು ಕುಡಿಯದಿರುವ ಸಂದರ್ಭದಲ್ಲಿ 'ಪಾಲಿದೆ ನೀಂ ಕುಡಿಯಲ್ಕೆ ಜಂಡಿಕೆ ಬೆಳದಪುದುಮಂ' ಎಂದು ನಂಬಿಸಿ ಹಾಲು ಕುಡಿಸಿದ ಕೂಡಲೇ ಬಾಲಕೃಷ್ಣನು 'ಈಗಳಬ್ಬೆ ಜಂಡಿಕೆಯೆಂತುದ್ದವಾದುದು' ಎಂದು ಕೇಳುವನು. ಇಲ್ಲಿ ಹಾಸ್ಯರಸವು ಕಾಣಬರುವುದು. ಕಂಸವಧಾನಂತರ ಆತನ ಪತ್ನಿಯರು ಕಂಸನ ಕಳೇಬರದ ಮುಂದೆ ಕುಳಿತು ಆತನ ಸುಗುಣವನ್ನೂ, ತಮ್ಮ ಪೂರ್ವದ ಸಾಂಸಾರಿಕ ಜೀವನ, ಈಗಿನ ವೈಧವ್ಯ ಬಾಳನ್ನೂ ಕುರಿತು 'ನಿನ್ನ ವಿದ್ಯಾಂಗವೊರ್ಮೊದಲೊಳ್ ಕರ್ಕಶಭೂಮಿಯೊಳ್ ಪೊರಳೆ ಕಂಡೆನಾವೆಂತು,' 'ಅಕ್ಕಟ ಧಾತ್ರನ ಮಾಟವಿಂತುಟೇ' ಎಂದು ಗೋಳಿಡುವ ಸಂದರ್ಭದಲ್ಲಿ ಕರುಣಾರಸವು ಮೂರ್ತಿವೆತ್ತು ಕಾಣಬರುವುದು. ಇಲ್ಲಿ ಶೃಂಗಾರರಸವು ಕಾರುಣ್ಯರಸ ಪರಿಪೋಷಕವಾಗಿರುವುದು. ಹೀಗೆಯೇ ಕೃಷ್ಣನು ಯಮನೊಡನೆ ಗುರುಪುತ್ರನಿಗಾಗಿ ಯುದ್ಧಮಾಡಲು ಸಿದ್ಧನಾಗುವಲ್ಲಿ ವೀರ ರಸವೂ, ಕೃಷ್ಣಜರಾಸಂಧರ ಯುದ್ಧದ ಕೊನೆಯಲ್ಲಿ ಕಾಣಬರುವ ಶ್ಮಶಾನ ಸದೃಶ ಯುದ್ಧಭೂಮಿಯ ವರ್ಣನೆಯಲ್ಲಿ ಬೀಭತ್ಸರಸವೂ ಪ್ರತಿಪಾದ್ಯವಾಗಿರುವುದು. ಜರಾಸಂಧನು ಕಂಸನ ವಧೆಯಿಂದ ಕ್ರುದ್ಧನಾಗಿ ಕೃಷ್ಣನ ಮೇಲೆ ಯುದ್ಧಮಾಡಲು ಹೊರಡುವ ಸಂದರ್ಭದಲ್ಲಿ ರೌದ್ರರಸವೂ, ಬಾಣಾಸುರನ ಸಹಾಯಕ್ಕಾಗಿ ಈಶ್ವರನ ಪ್ರಮಥಗಣವು ಬಂದು ಕೃಷ್ಣನನ್ನು ಎದುರಿಸಿ ಭಯಪಟ್ಟು, ಪೆಟ್ಟುತಿಂದು ಚೆಲ್ಲಾಪಿಲ್ಲಿಯಾಗಿ ಓಡುವ ವರ್ಣನೆಯಲ್ಲಿ 'ಭಯಾನಕ ರಸವೂ' ಕಾಣಬರುವುದು. ಜಗನ್ನಾಥ ವಿಜಯವು ಕೃಷ್ಣ ಚರಿತ್ರೆಯಾಗಿರುವುದರಿಂದ ಆದಿಯಿಂದ ಅಂತ್ಯದವರೆಗೆ ಶೃಂಗಾರ ರಸಮಯವಾಗಿದೆ. ಕೃಷ್ಣನು ಬಾಲ್ಯ ಭಾವದಲ್ಲಿದ್ದಾಗ ನಡಸಿದ 'ರಾಸಕ್ರೀಡಾದಿ ವರ್ಣನೆ'ಯೂ, ಶ್ರೀ ಕೃಷ್ಣನು ಕಂಸವಧಾನಂತರ ಕೈಗೊಂಡು ಸಾಧಿಸಿದ ರುಕ್ಮಿಣೀ ಸತ್ಯಭಾಮೆಯರೊಡನೆ ನಡೆವ ವಿವಾಹ, ಸಾಂಸಾರಿಕ ಜೀವನವೂ, ಉಷಾ ಅನಿರುದ್ಧರ ಪ್ರೇಮಜೀವನವೂ ಶೃಂಗಾರರಸಪ್ರಧಾನವಾದುವು.

ಅಲಕಂ ತುಂಬಿ ತಳಂ ತಳಿರ್ ತೊಡೆಮುಡಲ್
  ತೋಳ್ ಶಾಖೆ ಸುಯ್ಗಂಪು ಕಂ
ಪಲರ್ಗಣ್ಗೊಪ್ಪುವಲರ್ ಮುಗುಳ್ನಗೆ ಮುಗುಳ್
  ಬಿಂಬಾಧರಂ ಪಣ್ಣೆನಿ ।
ಪ್ಪ ಲತಾಂಗೀ ತನು ಚೂತವಲ್ಲರಿಯೊಳಂದೆಕ್ಕೆಕೆಯಿಂ
  ನಾಟಕಂ
ನಲಿಯುತ್ತಿರ್ದುವು ನೇತ್ರಷಟ್ಪದ ಮನಃ
  ಕೀರಂಗಳಾಕೃಷ್ಣನಾ ॥

ಎಂಬ ರುಕ್ಮಿಣೀ ಕೃಷ್ಣರ ಸಮ್ಮೇಳನದ ವರ್ಣನೆಯೂ, ಇದರಂತೆಯೆ ಶ್ರೀಕೃಷ್ಣ ರುಕ್ಮಿಣಿಯರ ಸ್ವಯಂವರ ಸನ್ನಿವೇಶವೂ, ಸತ್ಯಭಾಮೆಯ ವಿರಹವರ್ಣನೆ ಇತ್ಯಾದಿ ವಿಷಯಗಳೂ ಶೃಂಗಾರ ರಸಮಯ ಸನ್ನಿವೇಶಗಳು. ಹೀಗೆ ಜಗನ್ನಾಥ ವಿಜಯವು ಭಕ್ತಿ ಭಾವಕ್ಕೆ ಪ್ರಾಮುಖ್ಯತೆ ಪಡೆದು, 'ರಸಾತ್ಮಕಂ ಕಾವ್ಯಂ' ಎಂಬುದಕ್ಕನುಗುಣವಾಗಿ ಸಮಯೋಚಿತವಾಗಿ ವಿವಿಧ ರಸಾತ್ಮಕವಾದ ಉತ್ತಮ ಕಾವ್ಯವಾಗಿದೆ.

ರುದ್ರಭಟ್ಟನು ಸುಕವಿ; ರುದ್ರಭಟ್ಟವಿರಚಿತ ಶ್ರೀ ಜಗನ್ನಾಥ ವಿಜಯ ಮಹಾ ಪ್ರಬಂಧವು ಉತ್ತಮ ಕಾವ್ಯ. ಕವಿರಾಜ, ಕೃತಿಶಾರದಾಭ್ರ ಚಂದ್ರಾತಪ ರುದ್ರನು ವಿವಿಧರಸಯುತ ಶ್ರೀ ಜಗನ್ನಾಥವಿಜಯ ಕಾವ್ಯರಚನಾ ವಚಸ್ಸುಂದರೀ ನೃತ್ಯನಿವಾಸನೇ ಅಹುದು. ಜಗನ್ನಾಥ ವಿಜಯವು 'ಅನವದ್ಯಂ ರೀತಿ ಚೋದ್ಯಂ ಸಕಳವಿಬುಧಹೃದ್ಯಂ' ಎಂಬ ನುಡಿಯೂ ನಿಜವಾದುದು. ಈತನ ಕಾವ್ಯದಲ್ಲಿನ ಸಕಳ ವಿಬುಧಹೃದ್ಯವಾದ ರೀತಿ ಚೋದ್ಯವನ್ನು ಅರಿತು ಕವಿಗೆ ಗೌರವದ ಕಾಣಿಕೆ ಸಲ್ಲಿಸು

ವುದು ಸಹೃದಯರ ಕರ್ತವ್ಯವೇ ಆಗಿದೆ. ರುದ್ರ ಭಟ್ಟನು ಕನ್ನಡದ ಉತ್ತಮ ವೈದಿಕ ಪುರಾಣಕವಿ; ಶ್ರೀ ಜಗನ್ನಾಥ ವಿಜಯವು ಪಂಡಿತಪಾಮರ ರಂಜಕ ವಾದ ಉತ್ತಮ ಕನ್ನಡ ಪುರಾಣಕಾವ್ಯ. ಈ ಕವಿ ಕಾವ್ಯಗಳು ಕನ್ನಡಿಗರ ಹೆಮ್ಮೆಯ ವಿಷಯವಾಗಿವೆ. ಕನ್ನಡ ಸಾಹಿತ್ಯದಲ್ಲಿ ಉನ್ನತಸ್ಥಾನಪಡೆದಿವೆ.

ಎಚ್. ವಿ. ಶೇಷಾಚಾರ್, ಬಿ.ಓ.ಎಲ್.
ಮದರಾಸು ವಿಶ್ವವಿದ್ಯಾಲಯ

# ಕೆಲವು ಮನೆಗಳ ಮತ್ತು ಕುಲಗಳ ಹೆಸರುಗಳು

ಕನ್ನಡ, ತಮಿಳು, ತೆಲುಗು, ಮಲೆಯಾಳ, ತುಳು ಮುಂತಾದುವುಗಳನ್ನು ದ್ರಾವಿಡ ಭಾಷೆಗಳೆಂದು ಕರೆಯುತ್ತಾರೆ. ಇವು ತೆಂಕಣ ನಾಡ ನುಡಿಗಳು. ತೆಂಕಣ ನಾಡಿನ ನಿವಾಸಿಗಳಲ್ಲಿ ಹಲವರಿಗೆ ಇವುಗಳಲ್ಲಿ ಯಾವುದಾದರೊಂದು ತಾಯ್ನುಡಿಯಾಗಿರುತ್ತದೆ. ಕನ್ನಡಿಗರು, ತಮಿಳರು, ತೆಲುಗರು, ಮಲೆಯಾಳರು, ತುಳುವರು—ಯಾವ ಒಳಪಂಗಡಕ್ಕೆ ಸೇರಿದವರೇ ಆಗಿರಲಿ—ಅವರೆಲ್ಲರಲ್ಲೂ ಒಂದು ವಿಶಿಷ್ಟವಾದ ಸಂಸ್ಕೃತಿಯು ಪರಂಪರೆಯಿಂದ ಬಂದುದುಂಟು. ನಾಡವರ ಜೀವನದ ಪ್ರತೀಕವದು. ಅದು ಸಮಾಜ ಜೀವನದ ಹಾಸುಹೊಕ್ಕಾಗಿ ಪರಿಣಮಿಸಿದೆ. ನಾಡವರ ಸ್ವರೂಪ, ಮನೋವೃತ್ತಿ, ನಂಬಿಕೆಗಳು, ಆಚಾರ ನೀತಿಗಳು, ಆಹಾರ, ಉಡಿಗೆ ತೊಡಿಗೆಗಳು—ಇವೆಲ್ಲಾ ಆ ಸಂಸ್ಕೃತಿಯ ಸಾರಸರ್ವಸ್ವಗಳೆಂದರೆ ತಪ್ಪಾಗದು.

ನಮ್ಮ ಸಮಾಜದೊಳಗಿನ ಯಾವ ಅಂಶವನ್ನು ಅರಯ್ದುನೋಡಿದರೂ, ಅಲ್ಲೊಂದು ಏಕತೆಯನ್ನು ಕಾಣಬಹುದು. ತೋರಿಕೆಗೆ ಭಿನ್ನತೆಯಿದ್ದರೂ ಒಳಗೊಳಗೆ ಯಾವುದೋ ಒಂದು ಏಕೀಭವಿಸುವ ಶಕ್ತಿಯು (ಅದನ್ನೇ ನಮ್ಮ ಸಂಸ್ಕೃತಿಯೆನ್ನಬಹುದು) ಹಿತಕರವಾದ ಏಕೀಕರಣ ಕಾರ್ಯವನ್ನು ನಿರ್ವಹಿಸುತ್ತಲೇ ಇದೆ. ಉದಾಹರಣೆಗೋಸ್ಕರ ಕೆಲವು ಮನೆಗಳ ಮತ್ತು ಕುಲಗಳ ಹೆಸರುಗಳನ್ನು ಪರೀಕ್ಷಿಸೋಣ.

ತೆಂಕಣ ನಾಡಿನಲ್ಲಿ ಪ್ರಾಯಶಃ ಎಲ್ಲಾ ಮತೀಯರೂ ತಮ್ಮ ತಮ್ಮ ಮನೆಗಳ ಅಥವಾ ಊರುಗಳ ಹೆಸರುಗಳನ್ನು ಹೆಸರುಗಳ ಹಿಂದಾಗಲೀ ಮುಂದಾಗಲೀ ಉಪಯೋಗಿಸುತ್ತಾರೆ. ಧಾರವಾಡ ಮುಂತಾದ ಉತ್ತರ ಭಾಗಗಳಲ್ಲಿ ಮನೆಗಳ ಅಥವಾ ಊರುಗಳ ಹೆಸರುಗಳನ್ನು ತಮ್ಮ ತಮ್ಮ ಹೆಸರುಗಳನಂತರ ಉಪಯೋಗಿಸುವುದು ಈಗ ವಾಡಿಕೆಯಾಗಿದೆ. ಉದಾಹರಣೆ: ವೆಂಕಟರಾವ್ ಆಲೂರ, ಶಿ. ಶಿ. ಬಸವನಾಳ, ಶಿ. ರಾ. ಗುಳೇದಗುಡ್ಡ, ಇತ್ಯಾದಿ. ಮಿಕ್ಕೆಡೆಗಳಲ್ಲಿ ಮನೆಗಳ ಅಥವಾ ಊರುಗಳ ಹೆಸರುಗಳು ಮೊದಲೇ ಬರುತ್ತವೆ. ಉದಾಹರಣೆ: ತಿರುವಳ್ಳಿಕೇಣಿ ಸರ್ವೇಶ ಮುದಲಿಯಾರ್, ವೇಪ ರಮೇಶ, ಪಂಜೆ ಮಂಗೇಶ ರಾವ್, ಮಾವಿಲ್ ರಾಮ ನಂಬಿಯಾರ್, ಉಡಿಪಿ ರಾಮ ಹೆಗ್ಗೆ ಇತ್ಯಾದಿ.

ತೆಂಕಣ ನಾಡ ಮನೆಗಳ ಹೆಸರುಗಳಲ್ಲಿ ಒಂದು ಏಕತೆಯಿದೆ. ಅನೇಕ ಸಂದರ್ಭಗಳಲ್ಲಿ ಮನೆಗಳ ಹೆಸರುಗಳಿಗೆ ಯಾವುವೋ ಮರ ಗಿಡಗಳ ಅಥವಾ ಧಾನ್ಯಗಳ ಹೆಸರುಗಳ ಸಂಬಂಧವುಂಟು. ತೆಲುಗರಲ್ಲಿ ಇದು ಅಧಿಕ: ವೇಪ, ಬುಲುಸು. ತುಳುವಿನಲ್ಲೂ ಬಹಳವಿದೆ: ಕಂಗಿಲ (ಕಂಗು+ಇಲ್, ಅಡಕೆಮನೆ); ಕುಕ್ಕಿಲ (ಕುಕ್ಕು+ಇಲ್, ಮಾವಿನಮನೆ); ತಾರಿಪಡ್ಪು (ತಾರಿ = ತಾಳವೃಕ್ಷ); ಪಿಲತ್ತಡ್ಕ (ಪಿಲ = ಹಲಸು); ಇತ್ಯಾದಿ. ಕನ್ನಡದಲ್ಲಿ: ಕಬ್ಬಿನಹಿತ್ತಿಲು; ತೆಂಗಿನಕಟ್ಟೆ; ಅಡಕೆ ಹಿತ್ತಿಲು; ತೊಗರಿ; ಬೆಲ್ಲದ; ಉಳ್ಳಗಡ್ಡಿ; ಜೋಳದರಾಶಿ; ಇತ್ಯಾದಿ.

ತುಳುವನ್ನಾಡುವ ಬ್ರಾಹ್ಮಣರಲ್ಲಿ ಈ ಮನೆಗಳ ಹೆಸರುಗಳು ಕಾಲಕ್ರಮೇಣ ಕುಲಗಳ ಹೆಸರುಗಳಾಗಿ ಮಾರ್ಪಟ್ಟವೆ. ಇದು ಇಂದು ನಿನ್ನೆಯದಲ್ಲ. ಈ ವಿಷಯದಲ್ಲಿ ಇತಿಹಾಸವು ಮೌನವನ್ನು ತಾಳಿದೆ. ಇದರ ವಿಷಯವಾಗಿ ಬೇರೆ ಬೇರೆ ಅಭಿಪ್ರಾಯಗಳಿವೆ. ಆ ಮುಖ್ಯ ಕುಲಗಳ ಪೈಕಿ ಕೆಲವನ್ನು ಇಲ್ಲಿ ಕೊಟ್ಟಿದೆ: ಕುಕ್ಕಿಲ್ಲಾಯ, ಸರಳಾಯ, ಸಂಪಿಗೆತ್ತಾಯ, ಉಂಗುರುಪುಳಿತ್ತಾಯ, ಪಿಜತ್ತಾಯ, ಮಡಿಪುಳಿತ್ತಾಯ, ತಾಳಿತ್ತಾಯ; ಮನೋಳಿತ್ತಾಯ, ಕುದ್ವಣಾಯ; ಕುದುರೆತ್ತಾಯ; ಕಲ್ಲೂರಾಯ, ಪುತ್ತೂರಾಯ, ಕೊಳತ್ತಾಯ, ಬೈಪಾಡಿತ್ತಾಯ, ಪಡ್ಡಿಲ್ಲಾಯ, ಮೂಡಿಲ್ಲಾಯ, ತೆಂಕಿಲ್ಲಾಯ, ನಡ್ಡಂತಾಯ, ಮಿತ್ತಂತಾಯ, ಇತ್ಯಾದಿ. ಇವುಗಳಲ್ಲಿ ಕೆಲವಕ್ಕೆ ಮರಗಳ ಸಂಬಂಧವೂ, ಕೆಲವಕ್ಕೆ ಊರ ಹೆಸರುಗಳ ಸಂಬಂಧವೂ, ಇನ್ನು ಕೆಲವಕ್ಕೆ ಸ್ಥಾನನಿರ್ದೇಶೋದ್ದೇಶವೂ ಇದ್ದಂತೆ ಕಾಣುತ್ತದೆ. ಮಯೂರವರ್ಮನು ಬೇರೆ ಬೇರೆ ಮನೆಯವರನ್ನು ಪ್ರತ್ಯೇಕಿಸುವುದಕ್ಕೋಸ್ಕರ ಇಂತಹ ಬೇರೆ ಬೇರೆ ಸಂಕೇತನಾಮಗಳನ್ನು ಕೊಟ್ಟನೆಂದು ಕೆಲವು ಆಧಾರಗ್ರಂಥಗಳಲ್ಲಿ ಉಕ್ತವಾಗಿದೆ. ಅದು ಹೇಗಿದ್ದರೂ ಈ ಕುಲಬಿರುದುಗಳು ತುಂಬಾ ಅರ್ಥವತ್ತಾಗಿವೆ. ಇವುಗಳೊಳಗೆ ಕಾಲನೂ ನಾಶಗೊಳಿಸಲಾರದ ಒಂದು ಇತಿಹಾಸವೂ ಇರಬೇಕು. ಈ ಹೆಸರುಗಳ ಅಂತ್ಯದಲ್ಲಿ ಬರುವ 'ಆಯ' ಎಂಬುದು 'ಆರ್ಯ' ಶಬ್ದದ ಮರಿಯಲ್ಲ. ಅದು ತಮಿಳು ಕನ್ನಡಗಳ 'ಅವನು' ಶಬ್ದದ ಸಮಾನ ಶಬ್ದ. (ತುಳುವಿನಲ್ಲಿ 'ಆಯೆ ಏರ್ = ಅವನು ಯಾರ್'). ಇಲ್ಲಿ ಮೊದಲನೆಯ ಕುಕ್ಕಿಲ್ಲಾಯೆ (ಶಬ್ದವು) = ಕುಕ್ಕು+

ಇಲ್ + ಆಯೆ, ಎಂದರೆ ಮಾವು (ಕುಕ್ಕು) ಮರದ ಮನೆಯವನು. ಇದು ಕದಂಬರಾಜನು ಮೂಲ ಕುಕ್ಕಿಲ್ಲಾಯರಿಗೆ ದಯೆಪಾಲಿಸಿದ ಬಿರುದಾದರೂ, ಆ ರಾಜನು ಈ ಬಿರುದನ್ನು ಆ ಮೂಲಪುರುಷರಿಗೆ ಕೊಟ್ಟು ಗೌರವಿಸಿದುದರಲ್ಲಿ ಒಂದು ಔಚಿತ್ಯವಿರಲೇಬೇಕು. ಇಲ್ಲವಾದರೆ, ಅವರಿಗೆ ಯಾವುದಾದರೂ ಬೇರೊಂದು ಬಿರುದನ್ನು ಕೊಡಬಹುದಿತ್ತು. ಆ ಕುಲದ ಮೂಲಪುರುಷರು ಒಂದು ಮಧುರವಾದ ವಿಶೇಷಗುಣವುಳ್ಳ ಮಾವಿನ ಮರವನ್ನೋ ಉತ್ತಮವಾದ ಮಾವಿನ ತೋಟವನ್ನೋ ತಮ್ಮ ಮನೆಯ ಸಮೀಪದಲ್ಲಿ ಬೆಳಸಿರಬೇಕು. ಇದೊಂದು ಸಣ್ಣ ವಿಚಾರವೆಂದು ಯಾರೂ ಕಡೆಗಣಿಸಬಾರದು. ಏಕೆಂದರೆ, ಮಾವು, ಸಂಪಗೆ, ಅಶೋಕೆ, ಇತ್ಯಾದಿ ವೃಕ್ಷಗಳು ನಮ್ಮ ಕವಿಗಳ ಪ್ರೀತಿಯ ಸೊತ್ತುಗಳು. ನಮ್ಮ ಹಿರಿಯರು ಕೃಷಿಗಾರರು. ಮರಗಿಡಗಳು, ಹಣ್ಣುಕಾಯಿಗಳು, ಪತ್ರಪುಷ್ಪಗಳು ಅವರ ಸಂಪತ್ತು. ಹೀಗೆಯೇ ಉಂಗುರುಪುಳಿ, ಪಿಜ, ತಾಳೆ, ಮುಂತಾದುವುಗಳೂ ಮರಗಳ ಹೆಸರುಗಳು. ಇನ್ನು ಮನೋಳಿತ್ತಾಯ, ಕುದ್ವಣಾಯ ಮುಂತಾದುವುಗಳು, 'ಮನೋಳಿ'(ತೊಂಡೆಕಾಯಿಗಿರುವ ತುಳು ಶಬ್ದ), 'ಕುದನೆ' (ಬದನೆ ಜಾತಿಯ ಚಿಕ್ಕ ಕಾಯಿ) ಮುಂತಾದ ಕಾಯಿಗಳ ಸಮೃದ್ಧಿಯನ್ನು ಸಾರುತ್ತವೆ. 'ಮೂಡಿಲ್ಲಾಯ' ಮುಂತಾದ ಶಬ್ದಗಳು ಮನೆಗಳ ಸ್ಥಾನವನ್ನು ನಿರ್ದೇಶಿಸುತ್ತವೆ. ಪಡ್ಡಿಲ್ಲಾಯ=ಪಡ್ಡೈ+ಇಲ್+ಆಯ ಎಂದರೆ, ಪಡುವಣ ದಿಕ್ಕಿನ ಮನೆಯವನು; ಹಾಗೆಯೇ ಮೂಡಿಲ್ಲಾಯನು ಮೂಡಣ ಮನೆಯವನು; ನಡ್ಡಂತಾಯನು ನಡುಮನೆಯವನು; ಮಿತ್ತಂತಾಯನು ಮೇಲ್ಮನೆಯವನು. ಶ್ರೀ ಮಧ್ವಾಚಾರ್ಯರು 'ನಡ್ಡಂತಾಯರ' (ಮಧ್ಯಗೇಹರ) ಕುಲದವರು.

ಇವುಗಳಲ್ಲದೆ ನಾಡವರ ಸ್ಥಾನಮಾನಗಳಿಗೆ ಸಂಬಂಧಿಸಿದ ಕೆಲವು ಅಚ್ಚ ದ್ರಾವಿಡ ಹೆಸರುಗಳು ಒಂದೇ ನುಡಿಯನ್ನಾಡುವ ವಿವಿಧ ಜಾತಿಯವರಲ್ಲಿ ಬಳಕೆಯಲ್ಲಿವೆ. ಉದಾ: 'ಬಲ್ಲಾಳ'ವೆಂಬ ಕುಲದ ಹೆಸರು ತುಳುವನ್ನಾಡುವ ಕೆಲವು ಬ್ರಾಹ್ಮಣರ, ಬಂಟರ (ನಾಡವರ) ಮತ್ತು ಜೈನರ ಕುಲಗಳ ಹೆಸರಾಗಿದೆ. ಇನ್ನು ಹಲವೆಡೆಗಳಲ್ಲಿ ಬೇರೆ ಬೇರೆ ನುಡಿಗಳನ್ನಾಡುವ ವಿವಿಧ ಜಾತಿಯವರಲ್ಲಿ ಒಂದೇ ಕುಲದ ಹೆಸರನ್ನು ಕಾಣಬಹುದು. ಉದಾ: 'ಪೆರ್ಗಡೆ' (ಹೆಗ್ಗಡೆ) ಎಂಬುದೊಂದು ಕುಲದ ಹೆಸರು. ಇದು ಗೋಕರ್ಣ ಪ್ರಾಂತದ ಹವ್ಯಕರೆಂಬ ಕನ್ನಡ ಬ್ರಾಹ್ಮಣರಲ್ಲೂ, ದಕ್ಷಿಣ ಕನ್ನಡದ ಕೆಲವು ಗೌಡ ಸಾರಸ್ವತರಲ್ಲೂ, ತುಳುವನ್ನಾಡುವ ಜೈನರಲ್ಲೂ ಬಂಟರಲ್ಲೂ ಪ್ರಸಿದ್ಧವಾದುದು. ಅಲ್ಲದೆ ತೆಲುಗರಲ್ಲೂ 'ಪ್ರೆಗ್ಗಡೆ' ಎಂಬುದೊಂದು ಪ್ರಸಿದ್ಧವಾದ ಮನೆಯ ಹೆಸರಂತೆ. ಇವೆಲ್ಲಾ ಜನತೆಯೊಳಗಿನ ಏಕರೀತಿಯ ಮನೋವೃತ್ತಿಗೊಂದು ಸಾಕ್ಷ್ಯವಲ್ಲವೆ? ನಮ್ಮ ಸಂಸ್ಕೃತಿಯೊಂದಲ್ಲವೇ?

ಇವುಗಳು ವಿಚಾರಿಸುವವರಿಗೆ ಸ್ವಾರಸ್ಯವಾದ ಇತಿಹಾಸವನ್ನು ಸಾರುವವು. ಪಿರಿದು + ಕಡೆ→ ಪೆರ್ಗಡೆ→ಹೆಗ್ಗಡೆ. ಆದಿ ಕಾಲದಲ್ಲಿ ಪೆರ್ಗಡೆಯು 'ಪಿರಿದು ಕಡೆಯವನು', ದೊಡ್ಡ ಸ್ಥಾನದವನು; ಎಂದರೆ ಮುಖಂಡನು. ನಾಡಿನ ಮುಖ್ಯಸ್ಥನೆಂಬುದನ್ನರಿಪುವ ಅಚ್ಚ ದ್ರಾವಿಡ ಶಬ್ದವದು. ಹಾಗೆಯೇ ದೊಡ್ಡವರು ಎಂಬರ್ಥದಲ್ಲಿ 'ಹೆಬ್ಬಾರ' ಶಬ್ದವು ಕುಲದ ಹೆಸರಾಗಿರಬೇಕು. ಪಿರಿದು + ಆವರ್→ ಪಿರಿದು + ವಾರ್→ ಪೆರ್ಬಾರ್→ ಹೆಬ್ಬಾರ್ ಎಂಬ ರೂಪಭೇದಗಳನ್ನು ಪಡೆಯಿತು. (ಕೆಲವರು, ಪಿರಿದು+ಪಾರ್ವರ್→ ಪೆರ್ಬಾರರ್→ ಹೆಬ್ಬಾರ್ ಎಂಬರು). ಇನ್ನು 'ಬಲ್ಲಾಳ' ಶಬ್ದವು ಬಲ್ಲ+ಆಳ್, ಎಂದರೆ ಎಲ್ಲವನ್ನೂ ತಿಳಿದವನು ಅಥವಾ ಬಲವುಳ್ಳಂತಹವನು (ವೀರ) ಎಂದಾಗಿರಬೇಕು.

ಇವಲ್ಲದೆ ಕೋಟವೆಂಬ ಇನ್ನೊಂದು ಪಂಗಡದ ಕನ್ನಡ ಬ್ರಾಹ್ಮಣರಲ್ಲೂ ಅವರ ಎಂಟು ಕುಲಗಳನ್ನು ಎಂಟು ಚೆಂದವಾದ ಕನ್ನಡ ಶಬ್ದಗಳಿಂದ ಕರೆಯುತ್ತಾರೆ. ಅವುಗಳು ಯಾವುವೆಂದರೆ: ಹೊಳ್ಳ, ಕಾರಂತ, ಮಯ್ಯ, ಹಂದೆ, ನಾವುಡ, ಹೇರಳೆ, ಹೆಬ್ಬಾರ ಮತ್ತು ಬಾಸ್ರತ್ತಾಯ. ಇವುಗಳಲ್ಲಿ ಕೆಲವುಗಳ ಅರ್ಥವು ಚೆನ್ನಾಗಿ ಹೊಳೆಯುವುದಿಲ್ಲ. 'ಹೊಳ್ಳ'ರು ಯಾವುದೋ ಒಂದು ನಾಡಿನ ಪ್ರಸಿದ್ಧವಾದ ಹೊಳೆಯ ಸಾಮೀಪ್ಯದಲ್ಲಿದ್ದವರಂತೆ. ಹಾಗೆಯೇ 'ಹೇರಳೆ'ಯವರು 'ಹೇರಳ'ವಾದ ಸಂಪತ್ತಿನಿಂದ ಕೂಡಿದವರಂತೆ.

ಇನ್ನು ತುಳುವನ್ನಾಡುವ ಬ್ರಾಹ್ಮಣೇತರರಲ್ಲೂ ಬಲ್ಲಾಳ, ಪೆರ್ಗಡೆ ಎಂಬ ಕುಲಬಿರುದುಗಳಲ್ಲದೆ, ಆಳ್ವ, ಪಡಿವಾಳ, ಪುಂಜ, ಕೊಂಡೆ, ಮೇಲಾಂಟ, ಮೊದಲಾದ ಇತಿಹಾಸ ಸೂಚಕ ಕುಲಬಿರುದುಗಳು ತುಳು ನುಡಿ

ಯಲ್ಲಿಯೇ ಇವೆ. 'ಆಳ್ವರ' ಪೂರ್ವಿಕರು ಆಳುವುದರಲ್ಲಿ ನಿಪುಣರಿದ್ದಿರಬೇಕು. 'ಪಡಿವಾಳ'ರ ಮೂಲಪುರುಷರು ಕೋಟೆಕೊತ್ತಳಗಳ ಸಂರಕ್ಷಣೆಯ ಹೊಣೆಯನ್ನು ಹೊತ್ತ ವೀರರು. 'ಮೇಲಾಂಟರು' ಮೇಲ್ವಿಚಾರವನ್ನು ನೋಡುವುದರಲ್ಲಿ ನಿಸ್ಸೀಮರು.

ತಮಿಳರಲ್ಲೂ ಮುದಲಿಯಾರ್, ಪಿಳ್ಳೈ, ನಾಯನಾರ್, ಪತ್ತರ್, ನಾಡಾರ್, ಕೋನಾರ್ ಮುಂತಾದ ಕುಲದ ಹೆಸರುಗಳೂ ಜಾತಿಯ ಹೆಸರುಗಳೂ ಬಳಕೆಯಲ್ಲಿವೆ. ಕನ್ನಡದ 'ಪೆರ್ಗಡೆ'ಯಂತೆಯೇ ತಮಿಳ 'ಮುದಲಿಯಾರ್' (ಮುದನ್ಮೈಯಾರ್). ಅವರ ಪೂರ್ವಿಕರು ತಮಿಳರೊಳಗೆ ಅಗ್ರಸ್ಥಾನಾರ್ಹರು. 'ಪಿಳ್ಳೈ' ಎಂಬ ಶಬ್ದಕ್ಕೂ ಮನೋಹರವಾದ ಅರ್ಥವುಂಟು. ಅದೊಂದು ಶ್ರೇಷ್ಠ ಕುಲಬಿರುದು. ಆ ಶಬ್ದದ ಅರ್ಥವು 'ಮಗ'ನೆಂದು. ಹಿಂದಿನ ಕಾಲದಲ್ಲಿ ತಮ್ಮ ಸ್ವಾಮಿಭಕ್ತಿಯಿಂದ ರಾಜರುಗಳನ್ನು ಒಲಿಸಿದಂತಹವರಿಗೆ ಈ ಬಿರುದು ಲಭಿಸುತ್ತಿತ್ತೆಂದು ಒಂದು ಪಳಮೆಯಿದೆ. ರಾಜರಿಗೆ ಅವರು ಪುತ್ರಸಮಾನ ಪ್ರೀತಿಪಾತ್ರರು. ಇನ್ನು 'ನಾಯನಾರ್' ಶಬ್ದವು ಪೂಜ್ಯತೆಯನ್ನು ಹೇಳುತ್ತದೆ. 'ನಾಯನ' ಎಂದರೆ ತಂದೆ (ಹಿರಿಯನು) ಎಂದರ್ಥ. ತೀರ್ಥರೂಪ ಸಮಾನರಾದವರಿಗೆ ಈ 'ನಾಯನಾರ್' ಎಂಬ ಗೌರವ ಸೂಚಕ ಶಬ್ದವನ್ನು ಸೇರಿಸುವುದು ವಾಡಿಕೆಯಾಗಿ, ಕೊನೆಗೆ ಅದೂ ಒಂದು ಕುಲಬಿರುದಾಯಿತು. ಅಕ್ಕಸಾಲಿಗೆ ತಮಿಳಿನವರು 'ಪತ್ತರ್'( ಎಂದರೆ, ಮಣಿಯನ್ನು? ಹೊನ್ನಿಗೆ ಪತ್ತಿಸುವವರು, ಹತ್ತಿಸುವವರು) ಎನ್ನುವುದು ಬಹಳ ಉಚಿತವಾಗಿದೆ. ಇಂದಿಗೂ ಅನೇಕ ಅಕ್ಕಸಾಲಿಯವರ ಕುಲಬಿರುದು 'ಪತ್ತರ್' ಎಂದೇ ಇದೆ. 'ನಾಡಾರ್' ಎಂದರೆ 'ನಾಡವರು'. ಈಗ ಇದೂ ಒಂದು ಕುಲಬಿರುದು. ತುಳು ಕನ್ನಡ ಜನರಲ್ಲಿ 'ನಾಡವರು' ಒಂದು ಜಾತಿಯವರು (ಅವರನ್ನು ಬಂಟರೆಂದೂ ಕರೆಯುವುದುಂಟು).

ಮಲೆಯಾಳರಲ್ಲೂ ನಾಯರ್, ಮೇನವನ್, ಪಿಳ್ಳೈ, ನಂಬಿಯಾರ್, ವಾರಿಯರ್, ಕುರುಪ್ಪು, ಪಣಿಕ್ಕಾರ್ ಎಂದು ಮೊದಲಾದ ಅಚ್ಚ ದ್ರಾವಿಡ ಶಬ್ದಗಳಲ್ಲಿ ಕುಲಬಿರುದುಗಳಿವೆ. ಕೆಲವರು 'ನಾಯರ್' ಶಬ್ದವು ನಾಯಕ ಶಬ್ದದ ಒಂದು ಅಪಭ್ರಂಶರೂಪವೆನ್ನುತ್ತಾರೆ. ಇನ್ನು ಕೆಲವರು ನಾಯರ್-ವಂಶಜರ ಹಿರಿಯರು (ಬೇಟೆಯ) ನಾಯಿಗಳನ್ನುಪಯೋಗಿಸುತ್ತಿದ್ದ ಬೇಟೆಯ ಪಂಗಡದವರೆಂದು ಹೇಳುತ್ತಾರೆ. 'ಮೇನವನ್' ಎಂಬುದು 'ಮೇಲ್ + ಅವನ್', ಮೇಲ್ತನಿಕೆ ಮಾಡುವವನು ಎಂಬ ಅರ್ಥವನ್ನು ಕೊಡುತ್ತಿದೆ. 'ನಂಬಿಯಾರ್' ಪದವು 'ನಂಬು' ಎಂಬ ಧಾತುವಿನಿಂದುಂಟಾಗಿದೆ. ನಂಬಿಯಾರರ ಹಿರಿಯರು ನಂಬಿಕೆಗೆ ಯೋಗ್ಯರಾದ ಪುನೀತರು. ಈ 'ನಂಬು' ಎಂಬ ಮೂಲವು ನಂಬೀಶ, ನಂಬೂದರಿ ಮುಂತಾದ ಬೇರೆಯ ಪಂಗಡಗಳ ಹೆಸರುಗಳನ್ನು ಕೊಟ್ಟದೆ. ಇವರಲ್ಲಿ 'ನಂಬೂದರಿ' ಪಂಗಡದವರು ಮಲಬಾರಿನ ಪ್ರಥಮ ಶ್ರೇಣಿಯ ಬ್ರಾಹ್ಮಣರೆಂದು ಪರಿಗಣಿಸಲ್ಪಟ್ಟರುವರು. 'ಕುರುಪ್ಪು' ಇವರ ಮೊದಲಿಗರು ಕಾಳಿಕಾ ದೇವಾಲಯಗಳಲ್ಲಿ ಮಂಡಲ, ರಂಗವಲ್ಲಿ, ಚಿತ್ರ ಮುಂತಾದ 'ಕುರುಹು'ಗಳನ್ನು ಬಿಡಿಸುವವರಂತೆ. 'ಪಣಿಕ್ಕಾರ'ರ ಮೂಲಪುರುಷರು ಯುದ್ಧರಂಗಗಳಿಗೆ ಯೋಧರನ್ನು ಒದಗಿಸಿಕೊಡುವ ಕೆಲಸದವರು (ಪಣಿಯವರು) ಆಗಿದ್ದರೆಂದು ಹೇಳುತ್ತಾರೆ.

ಸಾರಾಂಶ: ದ್ರಾವಿಡ ದೇಶದವರಲ್ಲಿ ಬಾಹ್ಯದ ಭಿನ್ನತೆಯೊಳಗೆ ಒಂದು ಶಕ್ತಿಯುತವಾದ ಏಕತೆಯಿದೆ. ಇದಕ್ಕೆ ಮನೆಗಳ ಮತ್ತು ಕುಲಗಳ ಹೆಸರುಗಳು ಅಮರವಾದ ಸಾಕ್ಷ್ಯಗಳು. ಎಂದಿನಿಂದಲೂ ನಾಡವರು ಅಣ್ಣ ತಮ್ಮಂದಿರಂತೆ ಜೀವನ ನಡೆಯಿಸಿದರು. ಅವರ ಮನೋವೃತ್ತಿಯು ಏಕರೀತಿಯದು. ಆದುದರಿಂದಲೇ ಅವರು ಮನೆಗಳನ್ನು ಮತ್ತು ಕುಲಗಳನ್ನು ಹೆಸರಿಸುವಲ್ಲೊಂದು ವೈಶಿಷ್ಟ್ಯವನ್ನು ಕಾಣುತ್ತೇವೆ. ಕೆಲವು ಕೃತ್ರಿಮ ಕಾರಣಗಳಿಂದ ಒಮ್ಮೊಮ್ಮೆ ಭಿನ್ನತೆಯು ಭೀಕರ ಸ್ವರೂಪವನ್ನು ಧರಿಸಿ ವಿನಯಮೂರ್ತಿಯಾದ ಏಕತೆಯನ್ನು ತಳ್ಳಿಬಿಡುತ್ತದೆ. ಆದರೆ ಕಾಡುಗಿಚ್ಚಿಗೆ ಸಿಲುಕಿದ ವೃಕ್ಷದಂತೆ, ಸಂಸ್ಕೃತಿ ವೃಕ್ಷದ ತೊಗಟೆಯು ಒಂದು ಬಾರಿ ಉರಿದು ಬಿಟ್ಟರೂ ಒಳಗೆ ಜೀವರಸವು ಸುಡದು. ಮರವು ಮರಳಿ ಚಿಗುರುವುದು; ಹೂ ಬಿಡುವುದು; ಫಲವೀಯುವುದು. ಇನ್ನೂ ಮಹತ್ತ್ವದ ವಿಚಾರಗಳನ್ನು ಆರಯ್ದು ನೋಡಿದರೆ, ತೆಂಕಣ ನಾಡವರೂ ಬಡಗಣ ನಾಡವರೂ ತಂತಮ್ಮ ಏಕತೆಯನ್ನು ಕಂಡುಕೊಳ್ಳಬಹುದು.

ಎಂ. ಮರಿಯಪ್ಪ ಭಟ್, ಮದರಾಸು

## ನೊಂದನುಡಿ

ಸ್ವಾಗತವು ಸಾಹಿತ್ಯ ।
ಯಾಗದಧ್ವರಿಗಳಿಗೆ ।
ನಾಗರಿಕರಿಂಗಂತೆ ಪೂರ್ವದಿಶೆಯಾ ॥
ಸಾಗರದ ತಡಿಯೊಳಗೆ ।
ವಾಗುದೇವಿಯ ಸೇವೆ ।
ಗಾಗಿ ನೆರೆದಿಹ ಮಹಾಭ್ಯಾಗತರ್ಗೆ ॥ ೧ ॥

ಬಹುದಿನದ ಕೊರತೆಯೊಂ ।
ದಿಹುದಿಂತು ತಮ್ಮಗಳ ।
ಬಹುಮತಕೆ ನಮಿಸಿ ಬಿನ್ನಯಿಸಲೇನು ॥
ಸಿಹಿಯಾದರಾದರಿಸಿ ।
ಕಹಿಯಾಗೆ ಬದಿಗಿರಿಸಿ ।
ಮಹದಾಶೆಯಿರೆ ಪೇಳದಿರಲಾರೆನು ॥ ೨ ॥

ಕಾಡುವುದು ಬಡತನವು ।
ನಾಡನುಡಿಸೇವಕರ ।
ಮೂಡಿಯಡಗುವುವವರ ಮನದಿರಗಳು ॥
ನೋಡದೆಡೆಯೊಳೆ ತಾರೆ ।
ಮೂಡಿ ಮುಳುಗುವುದಂತೆ ।
ಕಾಡ ಸುಮದಂತವರು ನೋಡ ಸಿಗರು ॥ ೩ ॥

ಸದ್ರತ್ನ ರಾಶಿಯ ಸ ।
ಮುದ್ರದಿಂ ತೆಗೆಯದಿರೆ ।
ನಿದ್ರಿಪರಿಗದು ತಾನೆ ದೊರಕಲಿಹುದೆ ॥
ಮುದ್ರಣಕೆ ಬಾರದೆ ಬ ।
ಹುದ್ರವ್ಯ ಸೇರದೆ ದ ।
ರಿದ್ರರಸಿಕರ ಕೃತಿಯು ಸಭೆ ಕಾಂಬುದೆ ॥ ೪ ॥

ಕೊಡುಗೈಯ ಹಣಗಾರ ।
ಕೊಡದೆ, ಕೊಡಬಂದವನು ।
ಹೊಡೆದ ಹೊನ್ನಿನ ಹೊರೆಯ ಕವಿಗೀಯದೆ ॥
ಮಡದಿ-ಮಕ್ಕಳ ಚಿಂತೆ ।
ಮುಡಿಗಿಡದ ಮಡಿಕಂತೆ ।
ಪಿಡಿದ ಬಡಕವಿಗಿನ್ನು ಮರುಗಲಿಹರೇ ॥ ೫ ॥

ವಿಸ್ತರದ ತರತರದ ।
ವಸ್ತುಗಳ ಕೂರ್ತ ಪ್ರ ।
ಶಸ್ತ ಬರಹಗಳಿಂದು ದೊರೆಯುತಿಹವೊ ॥
ಪುಸ್ತಕವ ಕೊಂಡು ನಿಜ ।
ಮಸ್ತಕದೆ ಮಾನಿಸಿ ಸ ।
ಮಸ್ತರಿಗೆ ಪೇಳ್ವ ಧನಿಜನರಿಲ್ಲವೊ ॥ ೬ ॥

ಹಾಡುವಾ ಪೆಟ್ಟಿಗೆಯ ।
ನೋಡುಗಳನೊಟ್ಟಹರು ।
ಗೂಡುಗೊಂಬೆಗಳರ್ಥಗಾಡಿಯಿಹವೊ ॥
ಓಡಿಯೋಡದ ಮುರುಕು ।
ಗಾಡಿಗಳ ಕೂಡಿಹರು ।
ನಾಡನುಡಿಹೊತ್ತಗೆಗಳೆಡೆ ಕಾಣವು ॥ ೭ ॥

ಅನ್ಯಭಾಷಾಪ್ರೌಢಿ ।
ಕನ್ನಡಕದೇಕೆ ಕವಿ ।
ರನ್ನರಾಂಗಲಿಯೋದಿ ಕೃತಿ ಪೇಳ್ದರೇ ॥
ತನ್ನ ಮಂಗಲಸೂತ್ರ ।
ಹೊನ್ನದಾಗಿರೆ ಮತ್ತೆ ।
ಕನ್ನಡದ ನಾರಿ ನಾರನು ತೋರ್ವಳೇ ॥ ೮ ॥

ಭಾವಗತಿ-ರೀತಿಗಳ ।
ದಾವೊಂದನೆಣಿಸದಲೆ ।
ಭಾವಿಸರು ಕರ್ತೃಗಳ ಬಿರುದು ಬಳಗಾ ॥
ತಾವು ಭಾಷಾಂತರದ ।
ಠೀವಿಗೊಲಿದಿರಲಿದನು ।
ದೇವಿ ಕನ್ನಡ ಮಾತೆ ಕಂಡು ನಗಳೇ ॥ ೯ ॥

ಸರಳ ಶೈಲಿಯು ತೀರ ।
ವಿರಳವಾಗಿದೆ ಪರರ ।
ಬರೆಹದನುಕರಣೆ ಬಲು ಹಿರಿದಾಗಿದೆ ॥
ಬರಡು ಲೇಖನಮಾಲೆ ।
ಹರಡುತಿದೆಯಾದರೀ ।
ಬಿರುನುಡಿಯ ಮರುನುಡಿಯೆ ತೊರೆದುಬಿಡುವೆ ।

ಈವಿಧ ವಿಡಂಬನೆಗ ।
ಳಾವಂದು ತೊಲಗಿ ಸಂ ।
ಭಾವಿತರು ನಿಷ್ಪಕ್ಷರೆಂದಾಪರೋ ॥
ಕಾವುದೆಂದೋ ಜನತೆ ।
ಭಾವಿಕರ ಪಂಡಿತರ ।
ಭಾವಿ ಕಾವ್ಯಗಳೆಂದು ಬೆಳಗಲಿಹವೋ ॥ ೧೧ ॥

ನೆರೆನಾಡ ನುಡಿಸೇವೆ ।
ಯಿರದೆ ಗಡಿಮಿರುತಿರೆ ।
ಕರಿನಾಡ ಕಸ್ತೂರಿ ಮುದುರಿಕೊಳಲೇ ॥
ತರಿದು ಮುಳ್ಳಿನ ಕಾಯ ।
ತೊರೆದು ತಿನ್ನುವ ಭರದಿ ।
ಬಿಂದ ಬಾಳೆಯ ಹಣ್ಣು ಹಳಸುತಿರಲೇ ॥ ೧೨ ॥

ಜಸವೆತ್ತ ರಾಜರಂ ।
ರುಷಿಗಳಾಚಾರ್ಯರಂ ।
ರಸಿಕರಂ ಹರಿದಾಸ ಹದಿಬದೆಯರಂ ॥
ಅಸಮಾನ ವೀರರಂ ।
ಪ್ರಸವಿಸಿದ ಕನ್ನಡದ ।
ವಸುಧೆಯಭಿಮಾನವೆಮಗಿರಬೇಡವೇ ॥ ೧೩ ॥

ಕನ್ನಡದೆ ಬರೆದೋದಿ ।
ಕನ್ನಡದೆ ಪಾಡುವೆನು ।
ಕನ್ನಡದೆ ನಗಲು ಮರುಗಲು ಕಲಿವೆನು ॥
ಕನ್ನಡವ ಪೋಷಿಸದೆ ।
ಇನ್ನಾವುದಕು ಕುಡೆನು ।
ಕನ್ನಡಕೆ ದುಡಿವರಿಗೆ ನೆರಳೀವೆನು ॥ ೧೪ ॥

ಇನ್ನಾದರಿಂತು ಸಂ ।
ಪನ್ನಜನರಾಶಿಸಲು ।
ಕನ್ನಡದೆ ನವಕಾವ್ಯಗಳು ಬೆಳಗವೇ ॥
ಮುನ್ನಿನಾ ರಸಕವಿಗ ।
ಳಿನ್ನೊಮ್ಮೆ ಜನಿಸರೇ ।
ಕನ್ನಡವೆ ಜಗಕೆ ಕನ್ನಡಿಯಾಗದೆ ॥ ೧೫

ಪರದೇಶ ಪರಭಾಷೆ ।
ಪರವಸ್ತುಗಳಿಗೊಲಿದ ।
ಪುರುಷರ್ಗೆ ಕನ್ನಡವು ಕಸವಾದರೂ ॥
ಅರಸರ್ಗೆ ಸರಸರ್ಗೆ ।
ನೆರೆದ ಕನ್ನಡಿಗರ್ಗೆ ।
ಪರಿಷದವು ಹರುಷಮಂ ಸುರಿಸೆ ನಮಗೆ ॥ ೧೬ ॥

ಹೊಸದೇನನೆಂಬೆ, ಮಾ ।
ನಸವೆನ್ನದುರಿದುಯೆದೆ ।
ಬಿಸಿಯುಸಿರ ಬೀರೆ ಪೊಗೆಯೇರೆ ತಮಗೆ ॥
ರಸಿಕ ಷಟ್ಪದಿಗಳಿಗೆ ।
ಕುಸುಮಗಳನರ್ಪಿಸುವ ।
ಹೊಸಹರಕೆ ತೆತ್ತುನಾಂ ಬೀಳ್ಕೊಳ್ಳುವೆ ॥ ೧೭ ॥

ಮುದ್ರಾಡಿ ಜನಾರ್ದನಾಚಾರ್ಯ
ಮದರಾಸು

